ಕಾಯಕವೇ ಕೈಲಾಸ



# ಸಿದ್ಧಗಂಗಾ



ಸಂಪುಟ : ೪೨ ಸೆಪ್ಟೆಂಬರ್ ೨೦೦೬ ಸಂಚಿಕೆ ೯



ಆಗಸ್ಟ್ ೬ರಂದು ಕೆಂಗೇರಿ ಹೋಬಳಿ ಚನ್ನವೀರಯ್ಯನ ಪಾಳ್ಯದಲ್ಲಿ ನಡೆದ ಶ್ರೀ ಬಸವೇಶ್ವರ ಸ್ವಾಮಿ ದೇವಾಲಯದ ಜೀರ್ಣೋದ್ಧಾರ ಮತ್ತು ಪರಮಪೂಜ್ಯ ಶ್ರೀ ಶ್ರೀಗಳವರ ಗುರುವಂದನಾ ಮಹೋತ್ಸವದಲ್ಲಿ ಪರಮಪೂಜ್ಯ ಶ್ರೀ ಶ್ರೀಗಳವರು, ಶ್ರೀ ಪೇಜಾವರ ಸಂಸ್ಥಾನ ಮಠದ ಶ್ರೀ ಶ್ರೀಗಳು, ವಿವಿಧ ಮಠಗಳ ಹರಗುರು ಚರಮೂರ್ತಿಗಳು ಮತ್ತು ನೈಸ್ ಕಂಪನಿ ವ್ಯವಸ್ಥಾಪಕರಾದ ಶ್ರೀ ಅಶೋಕ್ ಖೇನಿ, ಶ್ರೀ ಎಂ. ರುದ್ರೇಶ್ ಮತ್ತಿತರರು.



ಬಿಜಾಪುರ ಜಿಲ್ಲೆ ತಾಳೀಕೋಟೆ ನಗರದಲ್ಲಿ ಎ.ಎಸ್. ಪಾಟೀಲ್ (ನಡಹಳ್ಳಿ) ಯುವಕ ಸಂಘ ಮುದ್ದೇಬಿಹಾಳ್ ಅವರು ಇತ್ತೀಚೆಗೆ ಏರ್ಪಡಿಸಿದ್ದ ಪರಮ ಪೂಜ್ಯ ಶ್ರೀ ಶ್ರೀಗಳವರ ಗುರುವಂದನಾ ಸಮಾರಂಭದಲ್ಲಿ ಹರಗುರು ಚರಮೂರ್ತಿಗಳು ಹಾಗೂ ಗಣ್ಯರು.



ಶ್ರೀಮಠದಲ್ಲಿ ಆಗಸ್ಟ್ ೧೫ರಂದು ನಡೆದ ೬೦ನೇ ಸ್ವಾತಂತ್ರ್ಯ ದಿನೋತ್ಸವ ಸಮಾರಂಭ ಪರಮಪೂಜ್ಯ ಶ್ರೀ ಶ್ರೀಗಳವರ ದಿವ್ಯ ಸಾನ್ನಿಧ್ಯದಲ್ಲಿ ವಿಜೃಂಭಣೆಯಿಂದ ನಡೆಯಿತು. ವೇದಿಕೆಯಲ್ಲಿ ಸಚಿವ ಶ್ರೀ ಸಿ. ಚೆನ್ನಿಗಪ್ಪ, ಜಿಲ್ಲಾಧಿಕಾರಿ ಶ್ರೀ ಎಸ್. ಆರ್. ಉಮಾಶಂಕರ್, ಸಿ.ಇ.ಓ. ಶ್ರೀ ಕೆ.ಎಸ್. ನಿಂಗಪ್ಪ ಮೊದಲಾದ ಗಣ್ಯರನ್ನು ಕಾಣಬಹುದು.




ಸೆಪ್ಟೆಂಬರ್ ೫ರಂದು ಶ್ರೀಮಠದಲ್ಲಿ ಪರಮಪೂಜ್ಯ ಶ್ರೀ ಶ್ರೀಗಳವರ ದಿವ್ಯಸಾನ್ನಿಧ್ಯದಲ್ಲಿ ನಡೆದ ಶಿಕ್ಷಕರ ದಿನಾಚರಣೆ ಸಮಾರಂಭದಲ್ಲಿ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು, ಸಚಿವ ಶ್ರೀ ಸಿ.ಎಂ. ಉದಾಸಿ, ಶಾಸಕ ಶ್ರೀ ನಾರಾಯಣ ಸ್ವಾಮಿ, ಪ್ರಜಾವಾಣಿ ಸ.ಸಂ. ಶ್ರೀ ಡಿ.ವಿ. ರಾಜಶೇಖರ್, ಜಿ.ಪಂ. ಸಿ.ಇ.ಓ. ಶ್ರೀ ಕೆ.ಎಸ್. ನಿಂಗಪ್ಪ ಅವರು ಉಪಸ್ಥಿತರಿದ್ದರು.




ಮುಖಪುಟ

ಸಂಪಾದಕ :
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ :
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ :
ಎಂ. ರೇಣುಕಾರಾಧ್ಯ

ಪ್ರಕಾಶಕರು:
**ಹೆಚ್.ಬಿ. ಗಂಗಾಧರಯ್ಯ**
**ಹಳೆಯ ವಿದ್ಯಾರ್ಥಿಗಳ ಸಂಘ,**
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104.

ಮುದ್ರಕರು:
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ
ಆಫ್‌ಸೆಟ್ ಮುದ್ರಣಾಲಯ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು -572 104.

ವಿಳಾಸ :
"ಸಂಪಾದಕರು",
'ಸಿದ್ಧಗಂಗಾ' ಮಾಸಪತ್ರಿಕೆ'
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104

ಲೇಖಕರ ಅಭಿಪ್ರಾಯಗಳು ಪತ್ರಿಕೆಯ ಅಭಿಪ್ರಾಯಗಳಲ್ಲ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಸೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೪೨ ಸೆಪ್ಟೆಂಬರ್ ೨೦೦೬ ಸಂಚಿಕೆ : ೯

## ಒಳಪುಟಗಳಲ್ಲಿ .....................



ಚಂದಾ ವಿವರ :
ವಾರ್ಷಿಕ ಚಂದಾ ರೂ. ೧೦೦/- ಆಜೀವ ಸದಸ್ಯತ್ವ ರೂ. ೧೦೦೦/-
ಬಿಡಿ ಪ್ರತಿ ರೂ. ೧೦.೦೦

ಓಂ

## ಶ್ರೀ ಸಿದ್ಧಲಿಂಗೇಶ್ವರ ವಚನ

ನೀರೊಳಗಣ ಪಾವಕನೆದ್ದು ಉರಿಯಲು
ಮೇಲುಗಿರಿ ಪರ್ವತ ಬೆಂದುದ ಕಂಡೆನಯ್ಯ
ಊರಳಿದು ಉಲುಹಡಗಿ
ಮಾರಿ ಮಸಣಿಯರು ಮಡಿದುದು ಸೋಜಿಗವಯ್ಯ
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.

ಶರಣನ ಮನದಲ್ಲಿ ಸುಜ್ಞಾನವೆಂಬ ಅಗ್ನಿಯು ಅಂತ ರಂಗದಲ್ಲಿ ಪ್ರಾಣಲಿಂಗವಾಗಿ ಪ್ರಜ್ವಲಿಸುತ್ತಿರುವಾಗ, ಅಹಂಕಾರ ಸಂಯುಕ್ತವಾದ ದೇಹಭಾವವು ಇಷ್ಟಲಿಂಗದಲ್ಲಿ ತರಹರಿಸುತ್ತಿರುವಾಗ, ಜ್ಞಾನದ ಕಣ್ಣಿನಿಂದ ಕಂಡ ಶರಣನು, ಲಿಂಗಾಂಗಿಯಾಗಿ ಅಂಗ ಕ್ರಿಯೆಗಳನ್ನೆಲ್ಲ ಇಷ್ಟಲಿಂಗದಲ್ಲಿ ಸುಟ್ಟು, ಜೀವತ್ರಯಗಳ ನಾಹಂ, ಕೋಹಂ, ಸೋಹಂ ಎಂಬ ಭಿನ್ನ ವಾಕ್ಯ ನಿಷ್ಪತ್ತಿಯಾಗಿ, ಭಿನ್ನಕ್ರಿಯೆ, ಭಿನ್ನಜ್ಞಾನ, ಭಿನ್ನಶಕ್ತಿಯರು ಇಷ್ಟ ಪ್ರಾಣಲಿಂಗಗಳಲ್ಲಿ ನಿಷ್ಪತ್ತಿಯಾದು ದೆಂಬುದು ಆಶ್ಚರ್ಯವೆನ್ನುತ್ತದೆ ವಚನ.

(ಕೃಪೆ : ಷಟ್‌ಸ್ಥಲಜ್ಞಾನಿ ಸೋಮಶೇಖರ ಶಿವಯೋಗಿಕೃತ ತೋಂಟದ ಸಿದ್ಧಲಿಂಗೇಶ್ವರನ ಷಟ್‌ಸ್ಥಲ ಜ್ಞಾನಿ ಜ್ಞಾನಸಾರಾಮೃತದ ಬೆಡಗಿನ ವಚನದ ಟೀಕೆ - ವೀರಶೈವ ಅಧ್ಯಯನ ಸಂಸ್ಥೆ- ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ - ಡಂಬಳ- ಗದಗ)

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಶರಣ ಚಿಂತಾಮಣಿಯೆ ಪರಮನಿರಂಜನ
ಪ್ರಣವಪಾವನರೂಪ ಶಿವತೇಜ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಪಾಪಿಗಳನ್ನುದ್ಧರಿಪ ಪಾವನ ಚರಿತನೆ
ಪುಣ್ಯಚೇತನಗಳ ಶಿವಸೂರ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ರಾಸಿ ಓದುಗಳೆಲ್ಲ ದಾಸರು ಚರಣದಲಿ
ಏಸೊತ್ತು ನೋಡಲಿ ನಿನ್ನ ಮಹಿಮೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಎಷ್ಟೊಂದು ಅಕ್ಕರೆ ಮಕ್ಕಳ ಮೇಲಿಟ್ಟೆ
ಉಣಲಿಟ್ಟೆ ಮೇಲೆ ಉಡಕೊಟ್ಟೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅನುಭಾವಕೆ ನಿಲುಕದ ಅರಿವಿನಾಗರವಾದ
ಭಾವದ ಬಯಕೆಯ ನಿಜನಿಲವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಪರಿಣಾಮದ ಮೇರುವೆ ಮನದ ಮಹಮಹಿಪತಿ
ಸುಳಿದು ತಿಳಿಬೆಳಕಾದ ಶಿವಸೂರ್ಯ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಒಳಗೆ ತೊಳೆವುದ ಕಲಿಸಿ ಹೊರಗಮರೆವುದ ಕಲಿಸಿ
ಹೊರಒಳಗೆ ಒಂದಾಗಿ ಇರ ಕಲಿಸಿ । ನಗುತಿರುವ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಆರೂಢಯೋಗಿ ನೀ ಆರಾಧ್ಯಯೋಗಿ ನೀ
ಆಚಾರದನುಭಾವದ ಶ್ರೀಗಿರಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಶೂನ್ಯಶೃಂಗಾರವೆ ಮಾನ್ಯ ಬಂಗಾರವೆ
ಆತ್ಮಸಿರಿವೈಭವದ ಕಲಶವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಯುಗದ ಸಿರಿಯಾಗಿರುವೆ ಜಗದ ಸಿರಿಯಾಗಿರುವೆ
ಯುಗಜಗವ ತುಂಬಿರುವ ಶಿವಸಿರಿಯೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

- ಹೆಚ್.ವಿ. ವೀರಭದ್ರಯ್ಯ





## ಶಿಕ್ಷಕ

ಶಿಕ್ಷಕ ಸರಳ ಜೀವಿಯಾಗಿರಬೇಕು. ಸದಾ ಅಧ್ಯಯನ ಪ್ರೇಮಿ ಅವನಾಗಬೇಕು. ಬಳಿಗೆ ಬರುವ ವಿದ್ಯಾರ್ಥಿಗಳ ಮನಸ್ಸನ್ನು ಅರಳಿಸುವ ಗುಣ ನಿಷ್ಠತೆಯನ್ನು ಕಾಪಾಡಿಕೊಳ್ಳುವಲ್ಲಿ ಎಚ್ಚರ ತಪ್ಪಬಾರದು. ಬೋಧಿಸುವ ವಿಷಯದ ಮೇಲೆ ಪ್ರಭುತ್ವ ಹೊಂದಿರುವುದರ ಜೊತೆಗೆ ವೈಯಕ್ತಿಕ ಚಾರಿತ್ರ್ಯವನ್ನು ತನ್ನ ವಿದ್ಯಾರ್ಥಿಗಳು ಮೆಚ್ಚುವಂತಿಟ್ಟುಕೊಳ್ಳುವುದು ಮುಖ್ಯ. ಮಕ್ಕಳು ನೋಡಿ ಕಲಿಯುವುದು ಸ್ವಾಭಾವಿಕ. ತಮ್ಮ ಅಧ್ಯಾಪಕರತ್ತ ಬೆರಳು ಮಾಡಿತೋರಿಸದಂತಿರಬಾರದು. ಅವರು ಬದಲಾಗಿ ಕೈಮುಗಿದು ಗೌರವಿಸುವಂತಿರಬೇಕು. ಶೀಲಸಂಪತ್ತಿನ ರತ್ನಗಣಿಯಾಗಿರಬೇಕು ಶಿಕ್ಷಕ. ಅಣ್ಣ ಬಸವಣ್ಣನವರು ಹೇಳುವಂತೆ 'ಎಡದ ಕೈಯಲಿ ಹಾಲು ಬಟ್ಟಲು, ಬಲದ ಕೈಯಲಿ ಓಲು ಗಟ್ಟಿಗೆ' ಹಿಡಿದಿರಬೇಕು. 'ದುರಾಚಾರಿ, ದುರ್ವ್ಯಸನಿ'ಯೆನಿಸಬಾರದು. ವಿದ್ಯಾರ್ಥಿಗಳನ್ನು ಪ್ರೀತಿಯಿಂದ ಮಾತನಾಡಿಸಬೇಕು. ಪ್ರೀತಿಯಿಂದ ತಿದ್ದಬೇಕು. ಒಂದು ಒಳ್ಳೆಯ ಮಾತು ಮಾಡುವ ಸತ್ಪರಿಣಾಮವನ್ನು ನೂರು ನಿಯಮಗಳು ಮಾಡಲಾರವು ಎಂಬ ಅರಿವು ದೊಡ್ಡದು. ಹೆತ್ತ ತಂದೆ ತಾಯಿಗಳಿಗಿಂತ ಕಲಿಸಿದ ಶಿಕ್ಷಕನಲ್ಲಿ ವಿದ್ಯಾರ್ಥಿಗೆ ನಂಬಿಕೆ ಹೆಚ್ಚಿರುತ್ತದೆ. ಹೆಚ್ಚಿರುವಂತೆ ಶಿಕ್ಷಕನ ಬಾಳಿರಬೇಕು. ಅಲೆಕ್ಸಾಂಡರನನ್ನು ಒಬ್ಬಾತ ಕೇಳಿದನಂತೆ 'ನಿಮಗೆ ತಂದೆ ಹೆಚ್ಚೋ, ಗುರು ಹೆಚ್ಚೋ' ಎಂದು. ಅದಕ್ಕೆ ಅಲೆಕ್ಸಾಂಡರ್ ಉತ್ತರಿಸಿದನಂತೆ 'ಗುರುವೇ ಹೆಚ್ಚು' ಎಂದು 'ಏಕೆ'? ಎಂದನಂತೆ ಪ್ರಶ್ನಿಸಿದಾಗ -ಅಲೆಕ್ಸಾಂಡರನ ಉತ್ತರ - 'ತಂದೆ ನನ್ನನ್ನು ಈ ಭೂಮಿಗೆ ತಂದರು. ಆದರೆ ಗುರು ನನ್ನನ್ನು ದೇವಲೋಕದೆಡೆಗೆ ನಡೆಸಿದರು' ಎಂದನಂತೆ. 'ನರಜನ್ಮವನ್ನು ಹರಜನ್ಮ' ವನ್ನಾಗಿಸುವ ಗುರು ದೊಡ್ಡವನು. ನಾವೆಲ್ಲ ವಿದ್ಯಾರ್ಥಿಗಳಾಗಿದ್ದ ದಿನಗಳಲ್ಲಿ ಪ್ರಾಥಮಿಕ ಶಾಲೆಗಳು ದೇವಾಲಯಗಳಂತಿದ್ದವು. ಶಿಕ್ಷಕರು ಪೂಜ್ಯಸ್ಥಾನವನ್ನು ಉಳಿಸಿಕೊಂಡು ಬಂದವರಾಗಿದ್ದರು. ಅವರು ಕೇವಲ ಮಗ್ಗಿ ಕಲಿಸುವ, ಕಾಗುಣಿತ ಹೇಳಿಕೊಡುವ, ಗುಣಾಕಾರ ಭಾಗಾಕಾರ ಕಲಿಸುವ ನಡೆದಾಡುವ ಯಂತ್ರಗಳಾಗಿ, ಮಾತಾಡುವ ಯಂತ್ರಗಳಾಗಿರಲಿಲ್ಲ. ವಿದ್ಯಾರ್ಥಿಗಳನ್ನು 'ಮನುಷ್ಯ'ರನ್ನಾಗಿ ಮಾಡುವ ದೇಹಶಿಲ್ಪಿಗಳಾಗಿದ್ದರು. ಅವರೂ ಸಂಸಾರಿಗಳೇ. ಅವರೆಂದೂ ಭೋಗಮುಖಿಗಳಾಗಿ ನಡೆದದ್ದು ವಿರಳ. ಇಂದೇನಾಗಿದೆ? ಶಿಕ್ಷಕರಾದವರು (ಎಲ್ಲರೂ ಅಲ್ಲ) ಕರ್ತವ್ಯವಿಮುಖಿ ಗಳಾಗುತ್ತಿರುವವರೇ ಅಧಿಕ. ಹಕ್ಕುಗಳತ್ತ ಧಾವಿಸುತ್ತಿದ್ದಾರೆಯೇ ವಿನಾ ಕರ್ತವ್ಯದತ್ತ ಎಡವಿ ಬೀಳುವುದೂ ಇಲ್ಲದಂತಾಗಿದೆ. ನಮ್ಮ ಬಳಿಗೆ ಬರುವ ಅನೇಕ ಗ್ರಾಮ ಬಂಧುಗಳು ತಮ್ಮೂರ ಶಾಲೆಯ ಬಗ್ಗೆ, ಆ ಶಾಲೆಗಳ ಶಿಕ್ಷಕರ ಬಗ್ಗೆ ತೋಡಿಕೊಳ್ಳುವ ನೋವನ್ನು ಕೇಳಿದಾಗ ಮನಸ್ಸಿಗೆ ವ್ಯಾಕುಲವಾಗುತ್ತದೆ. ಸರ್ಕಾರ ಇಂದು ಶಿಕ್ಷಕರಿಗೆ ಕೈತುಂಬಾ ವೇತನ ನೀಡುತ್ತಿದೆ. ಪ್ರಶಸ್ತಿ ಪುರಸ್ಕಾರಗಳನ್ನು ಕೊಡುತ್ತಿದೆ. ಸಂಘ ಸಂಸ್ಥೆಗಳೂ, ಮಠಮಾನ್ಯಗಳೂ, ಉದಾರಿಗಳೂ ಗೌರವಿಸುತ್ತಿದ್ದಾರೆ. ಜೀವನಾಂತ್ಯದವರೆಗೆ ಸರ್ಕಾರ ವಿಶ್ರಾಂತಿ ವೇತನ ಕೊಡುತ್ತಿದೆ. ಈ ಎಲ್ಲ ವಿದುಣ ಶಿಕ್ಷಕರ ಮೇಲಿದೆ. ಇದೆಲ್ಲವನ್ನೂ ಮನನ ಮಾಡಬೇಕು ಶಿಕ್ಷಕ. ಆತ್ಮಾವಲೋಕನ ಮಾಡಿಕೊಳ್ಳುವ ಪ್ರವೃತ್ತಿ ಶಿಕ್ಷಕನಿಗಿರಬೇಕು. *

## ಶಿಕ್ಷಕರ ದಿನಾಚರಣೆ



ಆತ್ಮೀಯರೇ,

ನಮಸ್ಕಾರ,

ಸೆಪ್ಟೆಂಬರ್ ತಿಂಗಳು ಶಿಕ್ಷಕರ ದಿನಾಚರಣೆಯ ಮಾಸ. ಡಾ॥ ಎಸ್.ರಾಧಾಕೃಷ್ಣನ್‌ರವರ ದ್ರಷ್ಟಾರ ದೃಷ್ಟಿಯ ಫಲ. ತಮ್ಮ ಹುಟ್ಟುಹಬ್ಬವನ್ನು (1888 ಸೆಪ್ಟೆಂಬರ್ 5) ಶಿಕ್ಷಕರ ದಿನವನ್ನಾಗಿ ಆಚರಿಸುವ ಸತ್ಸಂಪ್ರದಾಯವನ್ನು 'ಅಕ್ಷರ'ಗೊಳಿಸಿದ ಆದರ್ಶ ಶಿಕ್ಷಕರು ಡಾ॥ ರಾಧಾಕೃಷ್ಣನ್ ಅವರು ರಾಷ್ಟ್ರಪತಿ ಸ್ಥಾನಕ್ಕೇರಿದ ಘನತೆ ಅವರದು. ರಾಷ್ಟ್ರ ಕಂಡ ಅತ್ಯಂತ ಆದರಣೀಯ ಆದರ್ಶ ರಾಷ್ಟ್ರಪತಿಗಳಾಗಿದ್ದರು. ಶಿಕ್ಷಣವೇತ್ತರುಮ್ ತತ್ವಜ್ಞಾನಿ, ರಾಜಕೀಯ ಮುತ್ಸದ್ದಿಗಳು ಅವರಾಗಿದ್ದರು. 'ರಾಜಕೀಯವನ್ನು ಧರ್ಮ-ನೀತಿ-ಸಂಸ್ಕೃತಿಯ ತಳಹದಿಯ ಮೇಲೆ ಕೂಡಿಸಬೇಕು' ಎಂಬ ವಿಚಾರ ಅವರದಾಗಿತ್ತು. ಡಾ॥ ರಾಧಾಕೃಷ್ಣನ್ 1947ರಿಂದ 1949ರವರೆಗೆ ಭಾರತ ಸಂವಿಧಾನ ಸಭೆಯ ಸದಸ್ಯರಾಗಿ ಸೇವೆ ಸಲ್ಲಿಸಿದರು. 1949ರಲ್ಲಿ ಭಾರತದ ಪ್ರಥಮ ರಾಯಭಾರಿಯಾಗಿ ರಷ್ಯಾದಲ್ಲಿ ಸೇವೆಯನ್ನಾರಂಭಿಸಿ 1952ರವರೆಗೆ ಕರ್ತವ್ಯ ಪಾಲನೆಯಲ್ಲಿ ಅನುಪಮ ರೆನಿಸಿದರು. ಸ್ಟಾಲಿನ್ನಿನ ಮೇಲೆ ಪ್ರಭಾವ ಬೀರಿದರು. 1952ರಿಂದ 1967ರವರೆಗೆ ಭಾರತದ ಉಪ ರಾಷ್ಟ್ರಪತಿಗಳಾಗಿ ಸೇವೆ ಸಲ್ಲಿಸಿತು. 1962ರಿಂದ 1967ರವರೆಗೆ ರಾಷ್ಟ್ರಪತಿಗಳಾಗಿ ಸ್ಮರಣೀಯ ಸೇವೆ ಮಾಡಿದ ಕೀರ್ತಿ ಅವರದು, ಪಂಡಿತ ಜವಾಹರ್‌ಲಾಲ್ ನೆಹರೂ, ಶ್ರೀ ಲಾಲ್‌ಬಹದ್ದೂರ್ ಶಾಸ್ತ್ರಿ, ಶ್ರೀಮತಿ ಇಂದಿರಾಗಾಂಧಿ ಯವರೂ ಪ್ರಧಾನ ಮಂತ್ರಿಗಳಾಗಿದ್ದರು ಅವರು ರಾಷ್ಟ್ರಪತಿಗಳಾಗಿದ್ದ ಅವಧಿಯಲ್ಲಿ. 1967ರಲ್ಲಿ ರಾಷ್ಟ್ರಪತಿ ಹುದ್ದೆಯನ್ನು ತೊರೆದು, ಮದ್ರಾಸಿಗೆ ಬಂದು ನೆಲಸಿ, ಆದರ್ಶ ಸದ್ಗೃಹಸ್ಥರಾಗಿ ನಿವೃತ್ತಿ ಜೀವನವನ್ನು ನಡೆಸುತ್ತ, ಉತ್ತಮ ತತ್ವಶಾಸ್ತ್ರ ಗ್ರಂಥಗಳ ರಚನೆಯಲ್ಲಿ ತೊಡಗಿ, 87ವರ್ಷ ಸಂತೃಪ್ತ ಜೀವನ ಕಂಡು 1975ನೇ ಇಸ್ವಿ ಏಪ್ರಿಲ್ 17ರಂದು ಇಹವನ್ನು ಗೆದ್ದರು.

37 ಸದ್ಗ್ರಂಥಗಳನ್ನು ಬರೆದರು. 4 ಅನುವಾದ ಗ್ರಂಥಗಳನ್ನು ಕೊಟ್ಟರು. 14 ಲೇಖನಗಳನ್ನು ನೀಡಿದರು. 8 ಸಂಪಾದಿತ ಗ್ರಂಥಗಳು ಅವರಿಂದ ರಾಷ್ಟ್ರಕ್ಕೆ ಸಂದವು. ಅವರ ಗ್ರಂಥಗಳೆಲ್ಲ ಶ್ರೇಷ್ಠವೆನಿಸದುವು. ಭಾರತೀಯ ಜ್ಞಾನ ಪರಂಪರೆಯ ನಿತ್ಯದೀಪಗಳಾದುವು.

ಅವರ ಶಿಕ್ಷಣ ವಿಚಾರಧಾರೆ ಹೀಗಿದೆ. "Education is a second birth" ಶಿಕ್ಷಣ ಹೇಗಿರಬೇಕು? ಹೀಗೆ "The kind of Education that is imparted must not only be broad but should also be deep" ಶಿಕ್ಷಣವೆಂದರೆ ಏನು? ಎಂಬುದಕ್ಕೆ ಅವರ ಉತ್ತರ "Education is for the whole man, to think, to feel, to do, to be". ಇಂದಿನ ಶಿಕ್ಷಣ ಕ್ರಮ ಏನು ಮಾಡುತ್ತಿದೆ? ಕೇಳಿ, ಅವರ ನುಡಿಗಳಲ್ಲಿ "Our Educational system breaks the human spirit, spoils the human creativeness, and spoils the deciding natue of pupil".

ಕೃಷಿ ಒಂದು ದೇಶದ ಬೆನ್ನೆಲುಬು ಶಿಕ್ಷಣ ದೇಶದ ಆತ್ಮಶಕ್ತಿ ಎಂಬುದು ಡಾ॥ ಎಸ್. ರಾಧಾಕೃಷ್ಣನ್ ಅವರ ಸ್ಪಷ್ಟ ನಿಲುವಾಗಿತ್ತು.

- ಸಂಪಾದಕ





## ವಂದೇ ಮಾತರಮ್



### ಗೀತೆಯ ಶತಮಾನೋತ್ಸವ

**ಗೀತೆಯ ಕರ್ತೃ : ಬಂಕಿಮ್‌ಚಂದ್ರ ಚಟರ್ಜಿ**
**ಯಾರಿವರು : ಬಂಗಾಳಿ ಪ್ರಸಿದ್ಧ ಕವಿ**
**ಯಾವ ಪುಸ್ತಕದಲ್ಲಿದೆ : 'ಆನಂದಮಠ' ಕಾದಂಬರಿ**
**ರಾಷ್ಟ್ರಗೀತೆಯಾಗಿ ಘೋಷಣೆ : 1906 ಸೆಪ್ಟೆಂಬರ್ 7.**

ವಂದೇ ಮಾತರಮ್
ಸುಜಲಾಮ್ ಸುಫಲಾಮ್ ಮಲಯಜ ಶೀತಲಾಮ್
ಸಸ್ಯ ಶಾಮಲಾಮ್ ಮಾತರಮ್ .......... ವಂದೇ ಮಾತರಮ್ ॥೧॥

ಶುಭ್ರ ಜ್ಯೋತ್ಸ್ನಾ ಪುಲಕಿತ ಯಾಮಿನೀಮ್
ಫುಲ್ಲಕುಸುಮಿತ ದ್ರುಮದಲ ಶೋಭಿನೀಮ್
ಸುಹಾಸಿನೀಮ್ ಸುಮಧುರ ಭಾಷಿಣೀಮ್
ಸುಖದಾಮ್ ವರದಾಮ್ ಮಾತರಮ್ ......... ॥ ವಂದೇ ಮಾತರಮ್ ॥೨॥

ಕೋಟಿ ಕೋಟಿ ಕಂಠ ಕಲಕಲ ನಿನಾದ ಕರಾಲೆ
ಕೋಟಿ ಕೋಟಿ ಭುಜೈರ್ಧೃತ ಖರಕರವಾಲೆ
ಅಬಲಾ ಕೆನೋ ಮಾ ಎತೊ ಬಲೆ
ಬಹುಬಲ ಧಾರಿಣೀಮ್ ನಮಾಮಿ ತಾರಿಣೀಮ್
ರಿಪುದಲ ವಾರಿಣೀಮ್ ಮಾತರಮ್....... ॥ ವಂದೇ ಮಾತರಮ್ ॥೩॥

ತುಮಿ ವಿದ್ಯಾ ತುಮಿ ಧರ್ಮ
ತುಮಿ ಹೃದಿ ತುಮಿ ಮರ್ಮ
ತ್ವಂ ಹಿ ಪ್ರಾಣಾಃ ಶರೀರೆ ಬಾಹುತೆ ತುಮಿ ಮಾ ಶಕ್ತಿ
ಹೃದಯೆ ತು ಮಾ ಭಕ್ತಿ
ತೋಮಾರಯಿ ಪ್ರತಿಮಾ ಗಡಿ ಮಂದಿರೆ ಮಂದಿರೆ .......॥ ವಂದೇ ಮಾತರಮ್॥೪॥

ತ್ವಂ ಹಿ ದುರ್ಗಾ ದಶಪ್ರಹರಣ ಧಾರಿಣೀ
ಕಮಲಾ ಕಮಲದಲ ವಿಹಾರಿಣೀ
ವಾಣೀ ವಿದ್ಯಾದಾಯಿನೀ, ನಮಾಮಿ ತ್ವಾಂ, ನಮಾಮಿ ಕಮಲಾಮ್
ಅಮಲಾಮ್, ಅತುಲಾಮ್, ಸುಜಲಾಮ್, ಸುಫಲಾಮ್, ಮಾತರಮ್.....॥
ವಂದೇ ಮಾತರಮ್॥
ಶ್ಯಾಮಲಾಮ್, ಸರಲಾಮ್, ಸುಸ್ಮಿತಾಮ್, ಭೂಷಿತಾಮ್
ಧರಣೀಮ್, ಭರಣೀಮ್, ಮಾತರಮ್.....॥ ವಂದೇ ಮಾತರಮ್ ॥೫॥

## ರಾಷ್ಟ್ರಕ್ಕೆ ವಂದನೆ ಸಲ್ಲಿಸುವುದು ನಮ್ಮ ಧರ್ಮ ಮತ್ತು ಜೀವನದ ಮರ್ಮ

ವಂದೇ ಮಾತರಂ....ಗೆ ರಾಷ್ಟ್ರಗೀತೆ ರೂಪದಲ್ಲಿ ಮಾನ್ಯತೆ ದೊರೆತು ನೂರು ವರ್ಷ ಪೂರ್ಣಗೊಂಡ ಹಿನ್ನಲೆಯಲ್ಲಿ ನಡೆಯುತ್ತಿರುವ ಸಮಾರೋಪ ಸಮಾರಂಭದ ನಿಮಿತ್ತ ಸೆಪ್ಟೆಂಬರ್ 7ರಂದು ದೇಶದ ಎಲ್ಲಾ ಶಿಕ್ಷಣ ಸಂಸ್ಥೆಗಳಲ್ಲಿ ಸಾಮೂಹಿಕವಾಗಿ ವಂದೇ ಮಾತರಂ ಹಾಡುವ ಕುರಿತು ಕೇಂದ್ರ ಸರಕಾರ ಹೊರಡಿಸಿರುವ ಆದೇಶದ ವಿರುದ್ಧ ಕೆಲವು ಪ್ರತ್ಯೇಕತಾವಾದಿ ಮುಸ್ಲೀಮರು ವಿವಾದ ಸೃಷ್ಟಿಸಿದ್ದಾರೆ. ಈ ಗೀತೆ ಇಸ್ಲಾಂ ವಿರೋಧಿ ಎಂದು ಇವರು ಹೇಳುತ್ತಿದ್ದಾರೆ.

ಪ್ರತ್ಯೇಕತಾವಾದಿಗಳ ಗುರಿ 1905ರಲ್ಲಿ ಬೇರೆ ಇತ್ತು, ಮತ್ತು ಈಗ ಸಹ ಬೇರೆ ಇದೆ ಎಂದು ಕಾಣುತ್ತಿದೆ. ರಾಷ್ಟ್ರೀಯ ಮುಖ್ಯವಾಹಿನಿಯ ವಿರುದ್ಧ ತಮ್ಮ ಯೋಚನೆಗೆ ಮಾನ್ಯತೆ ದೊರಕಿಸಿಕೊಡಬೇಕು ಎಂಬುದಷ್ಟೇ ಇವರ ಉದ್ದೇಶವಿದ್ದಂತಿದೆ. ಹೆಸರೇನೋ ಇಸ್ಲಾಂನದ್ದಾಗಿದೆ. ಆದರೆ ಕೆಲಸವೆಲ್ಲವೂ ರಾಜಕೀಯ ಮತ್ತು ಕುಟಿಲ ನೀತಿಯದ್ದಾಗಿದೆ. ಸ್ವಾತಂತ್ರ್ಯಕ್ಕೆ ಮೊದಲು ಹಾಗೂ ನಂತರ ಇಸ್ಲಾಮ್ ಹೆಸರಿನಲ್ಲಿ ಸಾಕಷ್ಟು ಫತ್ವಾಗಳನ್ನು ಹೊರಡಿಸಲಾಗಿದೆ. ಈ ಪೈಕಿ ವಂದೇ ಮಾತರಂ ವಿರೋಧ ಸಹ ಇವುಗಳ ಮುಖ್ಯ ಉದ್ದೇಶಗಳ ಪೈಕಿ ಒಂದಾಗಿತ್ತು. ವಂದೇ ಮಾತರಂ ವಿರೋಧಿಗಳು ಎಬ್ಬಿಸುತ್ತಿರುವ ಈ ಹುಯಿಲಿನಲ್ಲಿ ಎಷ್ಟರ ಮಟ್ಟಿಗೆ ತಥ್ಯವಿದೆ ಎಂಬುದನ್ನು ಅರಿಯಲು ಇದನ್ನು ಇಸ್ಲಾಂ ದೃಷ್ಟಿಕೋನದಿಂದ ಪರಿಶೀಲಿಸುವುದು ಅನಿವಾರ್ಯ ಎಂಬ ಪ್ರಶ್ನೆ ಇಲ್ಲಿ ಏಳುತ್ತದೆ.

ಹಾಗಿಲ್ಲ ಎನ್ನುವುದಾದರೆ ಇಂತಹ ಶಕ್ತಿಗಳ ವಿರುದ್ಧ ಕಾನೂನು ಪ್ರಕಾರ ಕ್ರಮ ಕೈಗೊಳ್ಳಬೇಕಾಗುತ್ತದೆ. ಭಯೋತ್ಪಾದನೆಯ ಶಕ್ತಿಯನ್ನು ಹೆಚ್ಚಿಸುವ ಇಂತಹ ಚರ್ಯೆ ಇಡೀ ರಾಷ್ಟ್ರಕ್ಕೆ ಅಪಾಯಕಾರಿ. ಈ ಕುರಿತು ಆಳವಾಗಿ ವಿಚಾರ ಮಾಡುವುದು ಅಗತ್ಯ.

ವಂದೇ ಮಾತರಂನ ಪ್ರತಿ ಸಾಲೂ ಭಾರತಮಾತೆಯ ಗುಣಗಾನ ಮಾಡುತ್ತದೆ. ಇದು ಕೇವಲ ವಸುಂಧರೆಯ ವರ್ಣನೆಗೆ ಮಾತ್ರ ಸೀಮಿತವಾಗಿಲ್ಲ. ಆದರೆ ಕವಿ ಜೀವಂತ ದೇವತೆಯ ಪ್ರತಿರೂಪ ಎಂಬಂತೆ ಭಾರತವನ್ನು ವರ್ಣಿಸುತ್ತಿದ್ದಾನೆ. ಅದರ ಶಕ್ತಿ ಏನು ಮತ್ತು ಶತ್ರುಗಳನ್ನು ಸದೆಬಡಿಯುವ ಅದರ ತಾಕತ್ತೇನು ಎಂಬುದರ ರೋಚಕ ವಿವರಣೆ ಇಲ್ಲಿದೆ. ವಂದೇ ಮಾತರಂ ಕೇವಲ ಹಾಡಲ್ಲ, ಭಾರತದ ನೈಜತೆಯನ್ನು ಪ್ರತಿಬಿಂಬಿಸುವ ಒಂದು ದಾಖಲೆ. ಭಾರತವನ್ನು ಅರಿಯಬೇಕಾದಲ್ಲಿ ನಿಮ್ಮ ತಾಯಿಯನ್ನು ಅರಿಯಿರಿ ಎಂದು ಬಂಕಿಮ್‌ಚಂದ್ರರು ಆಹ್ವಾನ ನೀಡುತ್ತಿದ್ದಾರೆ.

ಇದರ ಸಂಪೂರ್ಣ ಉದ್ದೇಶ, ಆಕೆಯ ಪುತ್ರ ಪುತ್ರಿಯರಲ್ಲಿ ವಿಶ್ವಾಸ ಮೂಡಿಸುವುದಾಗಿದೆ. ದೇಶದ ಶತ್ರುಗಳಿಗೆ ತಾವು ಒಂದು ನಿಗೂಢ ಆಧ್ಯಾತ್ಮಿಕ ಶಕ್ತಿಯನ್ನು ಎದುರಿಸುತ್ತಿದ್ದೇವೆ ಎಂಬ ಅನುಭವ ಮೂಡಿಸುತ್ತದೆ. ತಮ್ಮ ದೇಶದ ನೆಲವನ್ನು ಸ್ವತಂತ್ರಗೊಳಿಸುವುದು ಅಂತಿಮ ವಾಗಿ ಬಂಕಿಮರ ಉದ್ದೇಶವಾಗಿತ್ತು. ಹೀಗಾಗಿ ದೇಶಕ್ಕಾಗಿ ಸರ್ವಸ್ವ ಅರ್ಪಿಸುವುದು ಇಲ್ಲಿ ಉಸಿರಾಡುವ ಎಲ್ಲರ ಧರ್ಮವಾಗಿದೆ.

ಭಾರತದಲ್ಲಿ ಒಂದೇ ಧರ್ಮ, ಜಾತಿ, ನಂಬಿಕೆಯ ವ್ಯಕ್ತಿಗಳಿಲ್ಲ. ಹಾಗಾಗಿ ದೇಶವನ್ನು ಮಾತೆಯಂತೆ ಪೂಜಿಸುವುದು ಹೇಗೆ ಎಂಬ ಪ್ರಶ್ನೆಯನ್ನು ಕೇಳಬಹುದು. ನಿರೀಶ್ವರವಾದಿಗಳು ಇದು ನಮ್ಮ ನಂಬಿಕೆ ಮತ್ತು ವಿಚಾರಧಾರೆಗೆ ವಿರುದ್ಧವಾಗಿದೆ ಎಂದು ಹೇಳಬಹುದು. ಆದರೆ ನಿರ್ಗುಣ, ನಿರಾಕಾರ ಭಗವಂತನಲ್ಲಿ ನಂಬಿಕೆ ಇಟ್ಟಿರುವವರೂ ಸಹ ಆತ ಅಪಾರ ಶಕ್ತಿಯ ಒಡೆಯನಾಗಿದ್ದಾನೆ ಎಂದು ನಂಬುತ್ತಾರೆ. ಯಾರದೆ ಗುಣ ಅಥವಾ ಶಕ್ತಿಗೆ ಮನ್ನಣೆ ನೀಡುವುದು ಅಥವಾ ಅದರ ಅನುಭವ ಆಗುವುದು ಎಂದರೆ ನಿರೀಶ್ವರವಾದಿ ಸಿದ್ಧಾಂತವನ್ನು ಅಲ್ಲಗಳೆಯುವುದು ಎಂದಲ್ಲ.

ವಂದೇ ಮಾತರಂ ಕುರಿತು ಎಲ್ಲರಿಗಿಂತ ಹೆಚ್ಚು ವಿರೋಧ ಬೆರಳೆಣಿಕೆಯ ಮುಸ್ಲೀಂ ಬಾಂಧವರಿಗೆ ಮಾತ್ರ ಇದೆ. ಇಲ್ಲಿನ ವರ್ಣನೆ ಯಾವುದೋ ದೇವಿಯ ಸಾಕ್ಷಾತ್ ವರ್ಣನೆಯಂತಿದೆ ಮತ್ತು ಇಲ್ಲಿ ಉಪಯೋಗಿಸಿರುವ ಅಲಂಕಾರಗಳು ಆಕೆಯ ಪೂಜೆಯೇ ಆಗಿದೆಯಲ್ಲವೇ ಎಂದು ಅವರು ಪ್ರಶ್ನಿಸಬಹುದು. ಈ ವಾದವನ್ನು ಆರಂಭಿಸಿದರೆ ವಂದೇ ಮಾತರಂ ಇಸ್ಲಾಂನ ಸಿದ್ಧಾಂತಗಳಿಗೆ ಪೂರಕವಾಗಿಯೇ ಇದೆ ಎನ್ನಬಹುದು. ಇಸ್ಲಾಂನಲ್ಲಿ ತಾಯಿಯನ್ನು ಪೂಜ್ಯ ಎಂದಿಲ್ಲವೇ? ಪೈಗಂಬರ್ ಮೊಹಮ್ಮದ್ ಸಾಹೇಬರ ನುಡಿಯಲ್ಲಿ ತಾಯಿಯ ಕಾಲಿನಡಿ ಸ್ವರ್ಗವಿದೆ ಎಂಬ ಮಾತಿದೆ. ಇಸ್ಲಾಂ ಮೂರ್ತಿ ಪೂಜೆಗೆ ವಿರುದ್ಧ ಎಂದಾದರೆ ತಾಯಿ ಮತ್ತು ಅವರ ಕಾಲಿನ ಕಲ್ಪನೆ ಚಿತ್ರವೊಂದನ್ನು ನಮ್ಮ ಕಣ್ಣಿನ ಮುಂದೆ ತರುವುದಿಲ್ಲವೆ? ಸ್ವಂತ ತಾಯಿಗಾದರೂ ಶರೀರ ಇದೆ. ಅದರೆ ವಂದೇ ಮಾತರಂ ನಲ್ಲಿ ವರ್ಣಿಸಿರುವ ತಾಯಿಗೆ ಯಾವುದೇ ಶರೀರವಾಗಲೀ, ಬಣ್ಣ ಅಥವಾ ರೂಪವಾಗಲಿ ಇಲ್ಲ. ಹೀಗಿರುವಾಗ ಇದನ್ನು ದೇವತೆ ರೂಪದಲ್ಲಿ ಪೂಜಿಸುವ ಪ್ರಶ್ನೆ ಎಲ್ಲಿ ಉದ್ಭವಿಸುತ್ತದೆ? ಇಲ್ಲಿ ಕೇವಲ ಅಲಂಕಾರ ಮತ್ತು ವಿಶೇಷಣಗಳಿವೆ. ಇದೇ ಕಾರಣಕ್ಕಾಗಿ ಅದಕ್ಕೆ ಆದರ ಲಭಿಸಿದೆ. ಈ ಆದರವನ್ನು ಪೂಜನೀಯ ಶಬ್ಧಗಳಲ್ಲಿ ಅಭಿವ್ಯಕ್ತಗೊಳಿಸಿದರೆ ಅದು ಮೂರ್ತಿ ಪೂಜೆಗೆ ಸಮವೇ?

ಭಾರತದಲ್ಲಿ ಮೊಗಲರ ಆಡಳಿತ ಇದ್ದಾಗ ಬಾದಶಹಾರನ್ನು 'ಜಿಲ್ಲೆ ಇಲಾಹಿ' ಎಂದು ಕರೆಯಲಾಗುತ್ತಿತ್ತು. (ಉದಾ: ಮುಗಲ್ ಎ ಅಜಂ ಚಿತ್ರ) ಭಗವಂತನ ದಿವ್ಯಪ್ರಕಾಶ ಎಂಬುದು ಇದರರ್ಥ. ಈ ಪದ, ಪ್ರತಿಮೆಯೊಂದರ ಪ್ರಸಂಸೆಯನ್ನು ಹೇಳುವಂತಿಲ್ಲವೇ? ಇಲ್ಲಂತೂ ಸಾಕ್ಷಾತ್ ಮೂಳೆ-ಮಾಂಸದಿಂದ ನಿರ್ಮಾಣಗೊಂಡ ಮನುಷ್ಯನಿಗಾಗಿ ಈ ಪದವನ್ನು ಉಪಯೋಗಿಸಲಾಗಿದೆ. ಮತ್ತೊಂದು ಅರ್ಥದಲ್ಲಿ ಹೇಳಬೇಕೆಂದರೆ ಈ ಪದದ ಮೂಲಕ ನೀವು ಒಂದು ಕಲ್ಲು ಅಥವಾ ದೇಶವನ್ನಲ್ಲ ಆದರೆ ಮನುಷ್ಯನೊಬ್ಬನನ್ನು ದೇವರೆಂದು ಮಾನ್ಯ ಮಾಡುತ್ತಿರುವಿರಿ ಅಲ್ಲವೇ? ಈ ತರ್ಕದ ಹಿನ್ನಲೆಯಲ್ಲಿ ನೋಡಿದರೆ ಇಸ್ಲಾಂ ಬಂಧುಗಳಿಗೆ ವಂದೇ ಮಾತರಂ ಪದಕ್ಕಿಂತ 'ಜಿಲ್ಲೆ ಇಲಾಹಿ' ಹೆಚ್ಚು ಆಕ್ಷೇಪಾರ್ಹ ಆಗಬೇಕಲ್ಲವೇ? ಒಂದೊಮ್ಮೆ ಇದನ್ನು ವಿಶೇಷಣ ಎಂದು ಅವರು ಹೇಳುವುದಾದರೆ ಭಾರತದ ವರ್ಣನೆಯ ವಿಶೇಷಣಗಳ ಬಗ್ಗೆ ಅವರಿಗೆ ಯಾವುದೇ ಹಿಂಜರಿಕೆ ಇರಬಾರದು ತಾನೇ? ವ್ಯಕ್ತಿಯ ಮುಖದಲ್ಲಿ ದೈವತ್ವದ ಪ್ರಕಾಶ ಇರಬಹುದಾದರೆ, ಶತ್ರುಗಳ ಸಂಹಾರ ಮಾಡುವ ಸಾಮರ್ಥ್ಯ ಹೊಂದಿರುವ ಮಾತೆ ಯನ್ನು ಸಹಸ್ರ ಬಾಹುಗಳನ್ನು ಹೊಂದಿರುವವಳು ಎಂದು ಪ್ರಶಂಸೆ ಮಾಡಬಹುದು ತಾನೇ?

ಇಸ್ಲಾಂ ತನ್ನ ಧ್ವಜದಲ್ಲಿ ಚಂದ್ರ ಮತ್ತು ತಾರೆಗೆ ಹೆಚ್ಚು ಪ್ರಾಧಾನ್ಯತೆ ನೀಡುತ್ತದೆ. ಈ ಧ್ವಜಕ್ಕೆ ವಂದನೆ ಸಲ್ಲಿಸಲಾಗುತ್ತದೆ. ಅದಕ್ಕೆ ರಾಷ್ಟ್ರೀಯ ಗೌರವ ನೀಡಲಾಗುತ್ತದೆ. ಧ್ವಜಕ್ಕೆ ಅಪಮಾನ ಮಾಡಿದವರನ್ನು ಶಿಕ್ಷಿಸಲಾಗುತ್ತದೆ. ಹಸಿರು ಬಣ್ಣ ಮತ್ತು ಚಂದ್ರ-ತಾರೆಯರು ಈ ಬ್ರಹ್ಮಾಂಡದ ಅಂಗ ತಾನೆ? ಧ್ವಜಕ್ಕೆ ಪ್ರಣಾಮ ಸಲ್ಲುತ್ತದೆಯಾದರೆ ಭೂತಾಯಿಗೆ ಯಾಕಾಗಬಾರದು? ಆಕಾಶದ ವಸ್ತುಗಳು ವಂದನೆಗೆ ಅರ್ಹ ಎಂದಾದಲ್ಲಿ ಭೂಮಿಯ ಮೇಲಿನ ಇತರ ವಸ್ತುಗಳು ಪೂಜನೀಯ ಎಂದು ಒಪ್ಪಲು ಹಿಂಜರಿಕೆ ಏಕೆ? ಭಾರತೀಯ ಸಂದರ್ಭದಲ್ಲಿ ಭಕ್ತಿ ಪ್ರದರ್ಶನವೆಂದರೆ ಪೂಜೆ ಎಂದಾಗುತ್ತದೆ. ಪೂಜೆ(ಇಬಾದತ್) ಪ್ರಾರ್ಥನೆಯು ಸಮಾನಾರ್ಥಕ ಪದವಾಗಿದ್ದು ಇದನ್ನು ಒಪ್ಪಲೇಬೇಕಾಗುತ್ತದೆ. ಬಂಗಾಳಿ ಭಾಷೆಯ ಅನೇಕ ಮುಸ್ಲೀಂ ಕವಿ ಹಾಗೂ ಸಾಹಿತಿಗಳು ಮಾನವನ ವಿಷಯದಲ್ಲಿ ವಂದನಾ ಎಂಬ ಪದವನ್ನು ಬಳಸಿದ್ದಾರೆ. ಯಾವೊಬ್ಬ ಬಂಗಾಳಿ ಮುಸ್ಲೀಂಗೂ ವಂದನಾ ಪದ ಎಂದರೆ ಅಲರ್ಜಿ ಇಲ್ಲ. ಆದರೆ ಅದನ್ನು ಅರಬ್ಬಿ ಮಾಧ್ಯಮದ ಮೂಲಕ ಪ್ರಯೋಗಿಸಿದರೆ ಖಂಡಿತಾ ಮುಸಲ್ಮಾನರು ಆಕ್ಷೇಪಣೆ ಎತ್ತುತ್ತಾರೆ. ಏಕೆಂದರೆ ಸಮಯ, ಕಾಲ ಮತ್ತು ದೇಶಾನುಸಾರ ಪ್ರತಿ ಸ್ಥಳದಲ್ಲೂ ತಮ್ಮದೇ ಆದ ಪದಗಳಿರುತ್ತವೆ ಮತ್ತು ಅವನ್ನು ತಮ್ಮದೇ ಆದ ರೀತಿಯಲ್ಲಿ ಬಳಸಲಾಗುತ್ತದೆ.

ಪ್ರಸಿದ್ಧ ಬಂಗಾಳಿ ವಿದ್ವಾನ್ ಮೌಲಾನಾ ಅಕ್ರಂ ಖಾನ್ ಸಾಹೇಬರ ಮುಖ್ಯ ಕೃತಿ 'ಮೊಸ್ತಫಾಚರಿತ'ದಲ್ಲಿ ಪುಟ 1575ರಲ್ಲಿ ಅರಬ್ ದೇಶದ ಭೌಗೋಳಿಕ ವಿವರಣೆ ಇದ್ದು ಅದರಲ್ಲಿ ಅವರು ಹೀಗೆ ಬರೆಯುತ್ತಾರೆ. 'ಧರಿಯಾಚೆ ವಕ್ಷೊ ಮಾಗೊ, ಕಾರ್ ಪದಲೇಖಾ, ಹೇ ಅರಬ್ ಮಾನವೇರ್ ಆದಿ ಮಾತೃಭೂಮಿ... ಅಂದರೆ ಕವಿ ಇಲ್ಲಿ ಅರಬ್ ದೇಶವನ್ನು ತಾಯಿ ಎಂದು ಸಂಭೋಧಿಸಿದ್ದಾರೆ.

ದೇಶವನ್ನು ನಾವು ತಾಯಿ ಎಂದರೆ ಅದನ್ನು ರೂಪಕ ಅರ್ಥದಲ್ಲಿ ಹೇಳುತ್ತೇವೆ. ದೇಶವನ್ನು ತಾಯಿಯ ರೂಪದಲ್ಲಿ ಸಂಭೋಧಿಸುವುದರ ಮೂಲ ಉದ್ದೇಶ ಇದೇ ಆಗಿದೆ. ಇಲ್ಲಿ ನಾವು ದೇಶವನ್ನು ಖುದಾ(ದೇವರು) ಎಂದು ಹೇಳುತ್ತಿಲ್ಲ. ನಾವು ತಾಯಿಯನ್ನು ತಾಯಿ ಎಂದು ಕರೆಯುವಲ್ಲಿ ಯಾವುದೇ ದೋಷ ಇಲ್ಲ ಎಂದಾದರೆ ದೇಶವನ್ನು ರೂಪಕ ಭಾವದಲ್ಲಿ ತಾಯಿ ಎಂದು ಸಂಬೋಧಿಸುವಲ್ಲಿ ಸಹ ಯಾವುದೇ ದೋಷ ಇರಲು ಸಾಧ್ಯವಿಲ್ಲ.

ದೇಶಭಕ್ತಿ, ದೇಶ-ಪೂಜೆ, ದೇಶ ವಂದನೆ, ದೇಶ-ಮಾತೃಕೆ ಒಂದೇ ಪ್ರಕಾರದ ವಿಭಿನ್ನ ಪದಗಳಾಗಿದ್ದು ಇಸ್ಲಾಂನ ದೃಷ್ಟಿಯಿಂದ ಸಂಪೂರ್ಣ ಗೌರವಾನ್ವಿತವಾಗಿದೆ. ಹಾಗಾಗಿ ವಂದೇ ಮಾತರಂ ಹಾಡುವುದು ಒಂದೇ ಧರ್ಮಕ್ಕೆ ಸೀಮಿತ ಅಲ್ಲ ಮತ್ತು ಅದು ಇಸ್ಲಾಂ ವಿರೋಧಿಯೂ ಅಲ್ಲ.

ದೇಶವನ್ನು ತಾಯಿ ರೂಪದಲ್ಲಿ ಸಂಭೋದಿಸುವ ಪದ್ಧತಿ ಅರಬ್ ಮತ್ತು ಪಾರ್ಸಿಯಲ್ಲಿ, ಹಿಂದಿನಿಂದಲೂ ನಡೆದು ಬಂದಿದೆ. ಉಮ್ಮುಲ್ ಕೋಶ(ಬಾಮ್ಯ ಜನನಿ), ಉಮ್ಮುಲ್ ಮೂಮಿನಿನ್ (ಮುಮಿಮೋಗಳ ಜನನಿ)ಉಮ್ಮುಲ್ ಕಿತಾಬ್ (ಪುಸ್ತಕಗಳ ಜನನಿ) ಇವೆಲ್ಲವೂ ತಾಯಿ ರೂಪದಲ್ಲಿ ಇರುವುದಾದರೆ ವಂದೇ ಮಾತರಂ ಪದಕ್ಕೆ ವಿರೋಧ ವ್ಯಕ್ತಪಡಿಸುವುದು ಎಷ್ಟು ಹಾಸ್ಯಾಸ್ಪದ ಅಲ್ಲವೇ?

ದೇಶದ ವರ್ಣನೆ ಇರುವ ಕಾರಣಕ್ಕಾಗಿ ವಂದೇ ಮಾತರಂ ಆಕ್ಷೇಪಾರ್ಹ ಎನ್ನುವುದಾದರೆ ಅರಬರ ರಾಷ್ಟ್ರಗೀತೆಯಲ್ಲಿ ಅರಬ್ ಖಂಡದ ಅನೇಕ ಭೂಭಾಗಗಳ ವರ್ಣನೆ ಇದೆಯೆಲ್ಲವೆ? ಉಜ್ಬೇಕಿಸ್ತಾನ ಅಥವಾ ಕಿರ್ಗಿಸ್ತಾನವಿರಲಿ, ಎಲ್ಲ ಕಡೆಯಲ್ಲೂ ಅವರ ರಾಷ್ಟ್ರಗೀತೆಯಲ್ಲಿ ಅಲ್ಲಿನ ಪಶುಪಕ್ಷಿಗಳ, ನದಿಬೆಟ್ಟಗಳ ಸುಂದರ ವರ್ಣನೆ ಕಾಣಸಿಗುತ್ತದೆ. ಹಿಂದೂಗಳು ಗೋವುಗಳನ್ನು ಅಪ್ಯಾಯತೆಯಿಂದ ನೋಡುವಂತೆ ಯೆಮನ್ ದೇಶದ ಜನ ತಮ್ಮ ಹೇಸರಗತ್ತೆಗಳನ್ನು ಪ್ರೀತಿಸುತ್ತಾರೆ. ಹೇಸರಗತ್ತೆ ನಮ್ಮ ಜೀವನದ ರೇಖೆ ಎಂದು ಅಲ್ಲಿನ ರಾಷ್ಟ್ರಗೀತೆಯಲ್ಲಿ ಹೇಳಲಾಗಿದೆ. ನಂಗಾ ಪರ್ಬತ್ ಬಹು ದೂರದವರೆಗೂ ಹರಡಿದ್ದು ಅನೇಕ ಕಡೆ ನೀರಿನ ಝರಿಗಳು ಮಾತೆಯ ಸ್ತನಗಳಿಂದ ಮಮತೆಯ ಕ್ಷೀರಧಾರೆ ಯಂತೆ ಕವಲೊಡೆಯುವುದನ್ನು ನೋಡಬಹುದು.

ಈಜಿಪ್ಟ್ ರಾಷ್ಟ್ರಗೀತೆಯಲ್ಲಂತೂ ಕೆಂಪು ಸಾಗರ, ಭೂಮಧ್ಯ ಸಾಗರ ಇತ್ಯಾದಿಗಳ ವರ್ಣನೆ ಇದೆ. ನೈಲ್ ನದಿ ಅವರಿಗೆ ಗಂಗೆಯಷ್ಟೇ ಪವಿತ್ರ. ಮರಣದ ನಂತರ ಸ್ವರ್ಗದಲ್ಲೂ ತಮಗೆ ನೈಲ್ ನದಿಯ ನೀರು ಕುಡಿಯಲು ದೊರೆಯಬೇಕೆಂದು ಅವರು ಬಯಸುತ್ತಾರೆ. ಪಿರಮಿಡ್‌ಗಳನ್ನು ಹೆಮ್ಮೆಯ ಸಂಕೇತ ಮತ್ತು ಪೂರ್ವಿಕರ ಪರಂಪರೆ ಎಂಬಂತೆ ರಾಷ್ಟ್ರಗೀತೆಯಲ್ಲಿ ಸ್ಮರಿಸಲಾಗುತ್ತದೆ.

ಡಾಕ್ಟರ್ ಇಕ್ಬಾಲ್ ತಮ್ಮ 'ನಯಾ ಶಿವಾಲಯ್'..ನಲ್ಲಿ ಕಲ್ಲಿನಲ್ಲಿ ಕೆತ್ತಿದ ಮೂರ್ತಿಯಲ್ಲಿ ಮಾತ್ರವಲ್ಲ. ಭಾರತದ ಮಣ್ಣಿನ ಎಲ್ಲ ಕಣಕಣದಲ್ಲೂ ದೇವರೇ ಕಾಣುತ್ತಾನೆ ಎಂದು ಬರೆದಿದ್ದಾರೆ. ಭಾರತವನ್ನು ದೇವರು ಎಂದು ಹೇಳುವ ಮೂಲಕ ಇಕ್ಬಾಲ್ ಇಸ್ಲಾಂ ವಿರೋಧಿ ಭಾವನೆ ವ್ಯಕ್ತಪಡಿಸಿದ್ದಾರೆ ಎಂದು ಒಂದೇ ಮಾತರಂ ವಿರೋಧಿಗಳು ಹೇಳುತ್ತಾರೆಯೇ? ವಂದೇ ಮಾತರಂ ನಲ್ಲಿ ಪ್ರತಿ ವಸ್ತುವಿನ ಪ್ರಶಂಸೆ ಇದ್ದು, ಈ ಗೀತೆಯ ಆತ್ಮವೂ ಆಗಿದೆ. ಪಾಕಿಸ್ತಾನದ ಜನಕ ಮೊಹಮ್ಮದ್ ಆಲಿ ಜಿನ್ನಾ ಲಾಹೋರಿನ ಆಗಿನ ಪ್ರಸಿದ್ಧ ಕವಿ ಜಗನ್ನಾಥ್ ಪ್ರಸಾದ್ ಆಜಾದ್ ಮೂಲಕ ಮೊದಲ ರಾಷ್ಟ್ರಗೀತೆ ಬರೆಸಿದ್ದರು. ಒಂದೂವರೆ ವರ್ಷದ ನಂತರ ಲಿಯಾಕತ್ ಅದನ್ನು ಬದಲಾಯಿಸಿದರು. ಪಾಕಿಸ್ತಾನದಲ್ಲಿ ರಾಷ್ಟ್ರಗೀತೆ ಮೂರು ಬಾರಿ ಬದಲಾವಣೆಗೊಂಡಿದೆ. ಜಗತ್ತಿನ ಪ್ರತಿ ರಾಷ್ಟ್ರದ ಜನತೆ ತಮ್ಮ ದೇಶದ ಬಗ್ಗೆ ಹೆಮ್ಮೆ ಹಾಗೂ ವಿಶ್ವಾಸ ಹೊಂದಿರುವಾಗ ಭಾರತದ ಕೋಟಿ ಕೋಟಿ ಜನತೆ ತಮ್ಮ ಕಲರವ ನಿನಾದದ ಮೂಲಕ ವಂದೇ ಮಾತರಂ ಅನ್ನು ತಮ್ಮ ಹೃದಯದ ಮಿಡಿತವಾಗಿರಿಸಿದರೆ ಅದರಲ್ಲಿ ಆಶ್ಚರ್ಯದ ಮಾತೇನೂ ಇಲ್ಲ. ಏಕೆಂದರೆ ರಾಷ್ಟ್ರಕ್ಕೆ ವಂದನೆ ಸಲ್ಲಿಸುವುದು ನಮ್ಮ ಧರ್ಮ, ಕರ್ತವ್ಯ ಮತ್ತು ಜೀವನದ ಮರ್ಮವೂ ಹೌದು.

**ಲೇಖಕರು: ಮುಜಫ್ಫರ್ ಹುಸೇನ್**
**ಕೃಪೆ : ವಿಜಯ ಕರ್ನಾಟಕ**

**ವಚನ**

ನಡೆ ಶುಚಿ, ನುಡಿ ಶುಚಿ,
ತನು ಶುಚಿ, ಮನಶುಚಿ, ಭಾವಶುಚಿ,
ಇಂತೀ ಪಂಚತೀರ್ಥಂಗಳನೊಳಕೊಂಡು
ಮರ್ತ್ಯದಲ್ಲಿ ನಿಂದ ನಿಮ್ಮ ಶರಣರ ತೋರಿ
ಎನ್ನನುಳುಹಿಕೊಳ್ಳಾ, ಚೆನ್ನಮಲ್ಲಿಕಾರ್ಜುನಾ

– ಶರಣೆ ಅಕ್ಕಮಹಾದೇವಿ

## 'ಸಿದ್ಧಗಂಗಾ' ಆಜೀವ ಸದಸ್ಯರಲ್ಲಿ ಮನವಿ

ಶ್ರೀಮಠದ ಮುಖವಾಣಿಯಾಗಿ 'ಸಿದ್ಧಗಂಗಾ' ಮಾಸಪತ್ರಿಕೆ 42ನೇ ವರ್ಷದಲ್ಲಿ ಮುನ್ನಡೆಯುತ್ತಿದ್ದು ನಾಡಿನಾದ್ಯಾಂತ ಪ್ರಸಾರ ಹೊಂದಿದೆ. ದೀರ್ಘಕಾಲದ ಮುನ್ನಡೆಗೆ ಪೂಜ್ಯ ಶ್ರೀ ಶ್ರೀಗಳವರ ಸೇವೆ ತ್ಯಾಗ ಮತ್ತು ಉದಾರತೆಯಿಂದ ನೀವು ಆಜೀವ ಸದಸ್ಯತ್ವ ಪಡೆದಿರುವುದು ಆಧಾರ ಎಂದು ಭಾವಿಸಿದೆ.

'ಸಿದ್ಧಗಂಗಾ' ಮುನ್ನಡೆಗೆ ಆರ್ಥಿಕ ಪರಿಸ್ಥಿತಿ (ಹಣಕಾಸು) ಕುಂಠಿತವಾಗಿದೆ. ಇದಕ್ಕೆ ಕಾರಣ ಆಜೀವ ಮೊತ್ತದ ನಿಶ್ಚಿತ ಠೇವಣಿಯಲ್ಲಿ ಬ್ಯಾಂಕ್ ಬಡ್ಡಿದರ ಇಳಿತ, ಮತ್ತು ಪೇಪರ್ ಮುದ್ರಣ, ಅಂಚೆವೆಚ್ಚ ದುಬಾರಿಯಾಗಿರುವುದು. ಈ ಸಮಸ್ಯೆ ನಿಮ್ಮ ಗಮನಕ್ಕೆ ತರಲಾಗುತ್ತಿದೆ.

ಈ ಪರಿಣಾಮ ಆಜೀವ ಚಂದಾವನ್ನು 2004ನೇ ವರ್ಷದಲ್ಲಿ ಶ್ರೀಶ್ರೀಗಳವರ ಅನುಮತಿ ಮೇರೆಗೆ ಸಂಘ 1000/- ರೂ. ಗೆ ನಿರ್ಧರಿಸಿತು. ಈ ತೀರ್ಮಾನದಂತೆ 1000/- ರೂ.ಗೆ ಸರಿ ದೂಗಿಸುವಂತೆ ಹಿಂದೆ 500/-ರೂ., 600/-ರೂ ನೀಡಿ ಆಜೀವ ಸದಸ್ಯರಾಗಿದ್ದವರು ಬಾಕಿ 500/- ರೂ., 400/-ರೂ. ಸಂದಾಯ ಮಾಡುತ್ತಿದ್ದಾರೆ.

ಈ ಉಳಿಕೆ ಹಣ 500/-ರೂ., 400/ ರೂ ಸಂದಾಯ ಮಾಡದೇ ಇರುವ ಆಜೀವ ಸದಸ್ಯರುಗಳು ಈ ಬಗ್ಗೆ ದಯಮಾಡಿ ತೀವ್ರ ಗಮನ ಹರಿಸಬೇಕಾಗಿ ಕೋರುತ್ತೇವೆ. ತಮ್ಮ ವಿಳಾಸದಲ್ಲಿರುವ LMನಂಬರ್ ಸೂಚಿಸಿ ನಗದಾಗಿ / ಎಂ.ಒ. / ಚೆಕ್/ಡಿ.ಡಿ. ಮೂಲಕ **'ಸಿದ್ಧಗಂಗಾ'** ಮಾಸಪತ್ರಿಕೆ ಹೆಸರಿನಲ್ಲಿ ಈ ಕೆಳಗಿನ ವಿಳಾಸಕ್ಕೆ ಕಳುಹಿಸಿ ಪತ್ರಿಕೆ ಚಿರಂಜೀವಿಯಾಗಿ ಮುನ್ನಡೆಯಲು ಹರಸಿ ಹಾರೈಸಬೇಕಾಗಿ ನಮ್ರ ವಿನಂತಿ.

**ಪ್ರಕಾಶಕರು**
ಸಿದ್ಧಗಂಗಾ ಮಾಸಪತ್ರಿಕೆ, ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104.







# ನಿಮ್ಮ ಮುಂದಿರುವ ಸವಾಲುಗಳು

**–ಡಿ.ವಿ. ರಾಜಶೇಖರ್**, ನಂ. 3448, 2ಬಿ ಮೈನ್, 2ನೆ ಕ್ರಾಸ್, ಆರ್.ಪಿ.ಸಿ. ಲೇಔಟ್, ವಿಜಯನಗರ, ಬೆಂಗಳೂರು-40.

ಶ್ರೀಯುತರು ದಿನಾಂಕ 05-09-2006ರಂದು ಸಂಯುಕ್ತ ವಿದ್ಯಾರ್ಥಿ ಸಂಘದ ವತಿಯಿಂದ ನಡೆದ ಶಿಕ್ಷಕರ ದಿನಾಚರಣೆಯಲ್ಲಿ ನೀಡಿದ ಉಪನ್ಯಾಸ

**ಪೂ**ಜ್ಯ ಸ್ವಾಮೀಜಿಯವರೆ, ಅಧ್ಯಾಪಕರೆ, ವಿದ್ಯಾರ್ಥಿಗಳೆ, ಶ್ರೀ ಸಿದ್ಧಗಂಗಾ ಮಠ ನಡೆಸುತ್ತ ಬಂದಿರುವ ಅಕ್ಷರ ದಾಸೊಹದ ಫಲ ಉಂಡವರಲ್ಲಿ ನಾನು ಒಬ್ಬ. ಬಹುಶಃ ಶ್ರೀ ಸಿದ್ಧಗಂಗಾ ಮಠ ಬೂದಿಗೆರೆ ಯಲ್ಲಿ ಹೈಸ್ಕೂಲೊಂದನ್ನು ಸ್ಥಾಪಿಸದೆ ಹೋಗದಿದ್ದರೆ ನಾನೂ ಹೊಲ ಉತ್ತುಕೊಂಡು ರೈತನಾಗಿ ಉಳಿ ಯುತ್ತಿದ್ದನೊ. ಈ ಶಾಲೆಯಿಂದಾಗಿ ನನ್ನ ಭವಿಷ್ಯವೇ ಬದಲಾಯಿತು. ಇದಕ್ಕಾಗಿ ನಾನು ಈ ಶಿಕ್ಷಣ ಸಂಸ್ಥೆಗೆ ಆಬಾರಿ ಯಾಗಿದ್ದೇನೆ.

ಸೆಪ್ಟೆಂಬರ್ ೭ ಶಿಕ್ಷಕರ ದಿನ. ಶಿಕ್ಷಕರಾಗಿದ್ದ ಸರ್ವಪಲ್ಲಿ ರಾಧಾಕೃಷ್ಣನ್ ಅವರು ರಾಷ್ಟ್ರ ದಲ್ಲಿ ಅತ್ಯುನ್ನತ ಹುದ್ದೆಯಿಂದ ರಾಷ್ಟ್ರಪತಿ ಸ್ಥಾನ ಕ್ಕೇರಿದರು. ಅವರ ನೆನಪಿನಲ್ಲಿ ನಾವು ಶಿಕ್ಷಕರ ದಿನವನ್ನು ಆಚರಿಸುತ್ತಿದ್ದೇವೆ. ನಾವು ನಮಗೆ ಶಿಕ್ಷಣ ನೀಡಿದ ಎಲ್ಲ ಶಿಕ್ಷಕರನ್ನೂ ನೆನೆದು ಗೌರವ ಸಲ್ಲಿಸಬೇಕಾದ ದಿನ. ನಮ್ಮಲ್ಲಿ ಎಷ್ಟೋ ಆಚರಣೆಗಳು ಇವೆ. ಪ್ರತಿದಿನ ಮಾಡ ಇದ್ದೇಇರುತ್ತದೆ. ಶಿಕ್ಷಕರ ದಿನವೂ ಹಾಗೆಯೇ ಆಗಿದೆ. ಪ್ರತಿವರ್ಷ ಬರುತ್ತದೆ. ಅಂದು ಶಿಕ್ಷಕರನ್ನೂ ಹೊಗಳುತ್ತೇವೆ, ಸನ್ಮಾನಿಸುತ್ತೇವೆ. ಅಲ್ಲಿಗೆ ಶಿಕ್ಷಕರ ದಿನಾಚರಣೆ ಮುಗಿಯುತ್ತದೆ.

ಇಂದು ನಿಜವಾಗಿಯೂ ಶಿಕ್ಷಕರ ದಿನವನ್ನು ಸಂತೋಷದಿಂದ ಆಚರಿಸುವಂಥ ವಾತಾವರಣದಲ್ಲಿ ನಾವು ಇದ್ದೇವೆಯೇ ಎಂದು ಯೋಚಿಸಿದರೆ ನಿರಾಶೆಯಾಗುತ್ತದೆ. ಎರಡು ದಶಕಗಳ ಹಿಂದೆ ಇದ್ದ ಪರಿಸ್ಥಿತಿಗೂ ಈಗ ಇರುವ ಸ್ಥಿತಿಗೂ ಅಪಾರವಾದ ವ್ಯತ್ಯಾಸವನ್ನು ಕಾಣಬಹುದು. ಗುರುಶಿಷ್ಯ ಪರಂಪರೆ ಬಹುಪಾಲು ನಶಿಸಿಹೋಗಿದೆ. ಶಿಕ್ಷಣದ ಅರ್ಥವೇ ಬದಲಾಗಿದೆ. ಹಿಂದೆ ಜ್ಞಾನಾರ್ಜನೆಗಾಗಿ ಶಿಕ್ಷಣ ಇತ್ತು. ಆದರೆ ಇಂದು ಉದ್ಯೋಗ ಹಣ ಗಳಿಸುವ ದಾರಿಯಾಗಿ ಪರಿವರ್ತಿತವಾಗಿದೆ. ಬದಲಾಗುತ್ತಿರುವ ಸಾಮಾಜಿಕ ಸ್ಥಿತಿಯೇ ಶಿಕ್ಷಣದ ಗುರಿ ಬದಲಾಗಲು ಕಾರಣ.

ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡಿದವರು ದೊಡ್ಡ ಕನಸನ್ನೇ ಕಂಡಿದ್ದರು. ಸಾಮಾಜಿಕ, ಶೈಕ್ಷಣಿಕ, ಆರ್ಥಿಕ ಸಮಾನತೆಯನ್ನು ನಿರೀಕ್ಷಿಸಿದ್ದರು. ಆದರೆ ಆದ್ದನೇನು? ಬಡವರು ಮತ್ತಷ್ಟು ಬಡವ ರಾಗಿದ್ದಾರೆ. ಶ್ರೀಮಂತರು ಮತ್ತಷ್ಟು ಶ್ರೀಮಂತ ರಾಗಿದ್ದಾರೆ. ನಾವು ಕಟ್ಟಿದ ರಾಜಕೀಯ ವ್ಯವಸ್ಥೆ ಭ್ರಷ್ಟ ಗೊಂಡಿದೆ. ಈ ಭ್ರಷ್ಟ ವ್ಯವಸ್ಥೆಯಲ್ಲಿ ಭಷ್ಟರು ಮಾತ್ರ ಬದುಕುಳಿಯಲು ಸಾಧ್ಯ ಎನ್ನು ವಂಥ ಪರಿಸ್ಥಿತಿ ನಿರ್ಮಾಣ ವಾಗಿದೆ. ಬಡವರು, ನೀತಿ ವಂತರು, ಪ್ರಾಮಾಣಿಕರು ಕ್ರಿಮಿಗಳ ರೀತಿಯಲ್ಲಿ ಬದುಕು ವಂತಾಗಿದೆ.

ಈ ಸಂಸ್ಥೆಯಲ್ಲಿ ಶಿಕ್ಷಣ ಪಡೆಯುತ್ತಿರುವ ಬಹುಪಾಲು ಮಕ್ಕಳು ಬಡತನದ ಹಿನ್ನಲೆಯಿಂದ ಬಂದವರು. ಶಿಕ್ಷಕರ ಹಿನ್ನಲೆಯೂ ಭಿನ್ನವಲ್ಲ. ತಾನು ಬೆಳೆದ ಬೆಳೆಗೆ ಸರಿಯಾದ ಬೆಲೆ ಸಿಗದೆ ರೈತರು ಕಂಗಾಲಾಗಿದ್ದಾರೆ. ವಿಶ್ವ ಮುಕ್ತ ಮಾರುಕಟ್ಟೆ ವ್ಯವಸ್ಥೆಗೆ ಭಾರತ ಬಾಗಿಲು ತೆರೆದಿರುವುದರಿಂದಲೂ ರೈತರು ದಿಕ್ಕೆಟ್ಟಿದ್ದಾರೆ. ಅವರು ಜೀವನ ಸಾಗಿಸುವುದೇ ಕಷ್ಟ ಎನ್ನುವಂಥ ಸ್ಥಿತಿ ನಿರ್ಮಾಣವಾಗಿದೆ. ಇನ್ನು ಮಕ್ಕಳನ್ನು ಹೇಗೆ ಮುಂದು ವರೆಸಲು ಸಾಧ್ಯ? ನಮ್ಮ ಕಣ್ಣ ಮುಂದೆಯೇ ಎಲ್ಲವೂ ಬದಲಾಗಿ ಹೋಗಿದೆ. ಹಠಾತ್ತನೆ ಸ್ಪರ್ಧೆಯ ಶಿಕ್ಷಕರು, ವಿದ್ಯಾರ್ಥಿಗಳು ಅಖಾಡಕ್ಕೆ ಬಿದ್ದಿದ್ದಾರೆ. ಭಾರತ ಒಪ್ಪಿಕೊಂಡ ಜಾಗತೀಕರಣದ ಪ್ರಭಾವದಿಂದಾಗಿ ಸಮಾಜದಲ್ಲಿ ಅಸಮಾನ ಸ್ಪರ್ಧೆ ಏರ್ಪಟ್ಟಿದೆ. ಅತ್ಯುನ್ನತ ಗುಣಮಟ್ಟದ ವಿದ್ಯಾರ್ಥಿಗಳನ್ನು ತಯಾರು ಮಾಡಬೇಕಾದ ಶಿಕ್ಷಕರಿಗೆ ಕೊಡುತ್ತಿರುವ ವೇತನ ಏನೂ ಸಾಲದು. ಇನ್ನು ಹೇಗೆ ಉತ್ತಮ ವಿದ್ಯಾರ್ಥಿಗಳನ್ನು ನಿರೀಕ್ಷಿಸಲು ಸಾಧ್ಯ. ಇನ್ನು ವಿದ್ಯಾರ್ಥಿಗಳ ಪಾಡಂತೂ ಹೇಳತೀರದು. ಇಲ್ಲಿರುವ ವಿದ್ಯಾರ್ಥಿಗಳನ್ನೇ ನೋಡಿ, ಇಲ್ಲಿ ಎಸ್.ಎಸ್.ಎಲ್.ಸಿ. ಪಿ.ಯು.ಸಿ., ಪದವಿ ಮುಗಿಸುತ್ತಾರೆ ಎಂದುಕೊಳ್ಳೋಣ. ಆನಂತರ ಏನು? ಇಲ್ಲಿನ ವಿದ್ಯಾರ್ಥಿಗಳಂತೆ ರಾಜ್ಯದ ಮೂಲೆ ಮೂಲೆಯಿಂದ ಸೇರಿದ ಲಕ್ಷಾಂತರ ವಿದ್ಯಾರ್ಥಿಗಳು ಪ್ರತಿವರ್ಷ ಶಿಕ್ಷಣದ ಮಾರುಕಟ್ಟೆಗೆ ಧುಮುಕುತ್ತಿದ್ದಾರೆ. ಹಣ ಉಳ್ಳವರು ಉತ್ತಮ ಹಿನ್ನಲೆಯಿಂದ

ಬಂದವರು ಹಣನೀಡಿ ಉತ್ತಮ ಕಾಲೇಜು ಗಳಲ್ಲಿ, ಉದ್ಯೋಗ ದೊರಕಬಹುದಾದ ಕೋರ್ಸುಗಳನ್ನು ಆರಿಸಿಕೊಂಡು ಕಾಲೇಜುಗಳಿಗೆ ಪ್ರವೇಶಿ ಸುತ್ತಾರೆ. ಉಳಿದ ಬಡ ವಿದ್ಯಾರ್ಥಿಗಳ ಗತಿ ಏನು? ಅವರಿಗೆ ಅವಕಾಶ ಕೊಡುವವರು ಯಾರು? ಅವರು ಹೊಟ್ಟೆ ಹೊರೆದು ಕೊಳ್ಳುವುದು ಬೇಡವೇ? ಲಕ್ಷಾಂತರ ಮಂದಿ ವಿದ್ಯಾರ್ಥಿಗಳು ಅವಕಾಶವಿಲ್ಲದೆ, ಪ್ರೋತ್ಸಾಹವಿಲ್ಲದೆ, ಏನು ಮಾಡಬೇಕೆಂದೂ ತೋಚದೆ ಹಳ್ಳಿಯಲ್ಲಿ ಅಲೆಯುತ್ತಲೆ ರಾಜಕೀಯದಲ್ಲಿ ಗುಂಡಾ ಆಗಿಯೋ, ನಗರದ ಬಾರುಗಳಲ್ಲಿ ಮಾಣಿ ಯಾಗಿಯೋ, ಗಾರೆಕೆಲಸದವ ನಾಗಿಯೋ ಜೀವ ಉಳಿಸಿ ಕೊಳ್ಳುತ್ತಾರೆ. ಇದೆಂಥಹ ವಿಪರ್ಯಾಸ ನೋಡಿ!.

ಇಂಥ ಭಯಾನಕ ಸ್ಥಿತಿ ಇಂದು ನಮ್ಮ ವಿದ್ಯಾವಂತ ವಿದ್ಯಾರ್ಥಿಗಳ ಮುಂದಿದೆ. ಹಾಗಾದರೆ ಭವಿಷ್ಯ ಕಟ್ಟಿಕೊಳ್ಳುವ ದಾರಿ ಯಾವುದೂ ಇಲ್ಲವೆ? ನಿಜವಾಗಿಯೂ ಯಾರೂ ನಿರಾಶರಾಗಬೇಕಿಲ್ಲ. ನಿಮಗೆ ಇಚ್ಛಾಶಕ್ತಿ ಬೇಕು. ನಿಮ್ಮ ಶಿಕ್ಷಣದ ಹೊಣೆ ಹೊತ್ತ ಶಿಕ್ಷಕರು ನಿಮಗೆ ಸರಿಯಾದ ಮಾರ್ಗದರ್ಶನ ನೀಡಿದರೆ ನೀವೂ ಈ ಸ್ಪರ್ಧಾತ್ಮಕ ಜಗತ್ತಿನಲ್ಲಿ ಜಯ ಗಳಿಸಲು ಸಾಧ್ಯ. ಬದುಕನ್ನು ಕಟ್ಟಿಕೊಳ್ಳಲು ಸಾಧ್ಯ. ಹೀಗಾಗ ಬೇಕಾದರೆ ಮೊದಲು ಶಿಕ್ಷಕರಿಗೆ ಉತ್ತಮ ವೇತನ ನೀಡಬೇಕು. ಆಧುನಿಕ ಬದುಕಿಗೆ ಬೇಕಾದ ಶಿಕ್ಷಣ ಒದಗಿಸಲು ಶಿಕ್ಷಕರು ಮೊದಲು ಸಿದ್ಧರಾಗಬೇಕು. ಅವರಿಗೆ ಮಾಡಲು ಎಲ್ಲ ಸೌಲಭ್ಯಗಳನ್ನು ಒದಗಿಸಬೇಕು.

ಇಂದು ಜಗತ್ತು ಮುಕ್ತಗೊಂಡಿದೆ. ಉದ್ಯೋಗ ಗಳಿಸಲು ನೂರಾರು ದಾರಿಗಳಿವೆ. ಅವುಗಳನ್ನು ನಿಮ್ಮ ಶಿಕ್ಷಕರು ತೋರಿಸಬೇಕಷ್ಟೆ. ನೀವು ಜೀವನದಲ್ಲಿ ಒಳ್ಳೆಯ ದನ್ನು ಸಾಧಿಸಬೇಕಾದರೆ ಕಷ್ಟಪಡಲು ನೀವು ಸಿದ್ಧರಾಗಬೇಕು. ಶಿಕ್ಷಕರು ವಿದ್ಯಾರ್ಥಿಗಳಿಗೆ ಇಂದಿಗೆ ಅಗತ್ಯವಾದ ಶಿಕ್ಷಣವನ್ನು ನೀಡಬೇಕು. ಪಠ್ಯಪುಸ್ತಕಗಳು ಪರೀಕ್ಷೆಗಾಗಿ ಕಡ್ಡಾಯ. ಆದರೆ ಸ್ಪರ್ಧೆಯಲ್ಲಿ ಭಾಗವಹಿಸಲು ಅವು ಸಾಲವು. ಹೆಚ್ಚಿನ ಜ್ಞಾನವನ್ನು ವಿದ್ಯಾರ್ಥಿಗಳಿಗೆ ಕೊಡುವ ಮಹತ್ವದ ಕೆಲಸವನ್ನು ಶಿಕ್ಷಕರು ಇಂದು ಮಾಡಬೇಕಿದೆ. ಇದು ಕಂಪ್ಯೂಟರ್ ಯುಗ. ಮಾಹಿತಿಗೇನೂ ಕೊರತೆಯಿಲ್ಲ. ಈ ಸೌಲಭ್ಯ ಬಳಸಿಕೊಂಡು ವಿದ್ಯಾರ್ಥಿಗಳಲ್ಲಿ ಹೆಚ್ಚಿನ ಜ್ಞಾನವನ್ನು ತುಂಬಬೇಕಿದೆ. ಮೊದಲು ಬದಲಾದ ಕಾಲಕ್ಕೆ ತಕ್ಕಂತೆ ಶಿಕ್ಷಕರೂ ಬದಲಾಗಬೇಕು. ಸ್ಪರ್ಧೆಗೆ ಕಟ್ಟಾಳುಗಳನ್ನು ತಯಾರು ಮಾಡುವ ಗರಡಿ ಮನೆ ಶಿಕ್ಷಣ ಸಂಸ್ಥೆ ಗಳಾಗಬೇಕು. ಉದ್ಯೋಗಕ್ಕೆ ಲಕ್ಷಾಂತರ ಅವಕಾಶಗಳಿವೆ. ಅಂಥ ಉದ್ಯೋಗಗಳನ್ನು ಗಳಿಸಲು ಬೇಕಾದ ಶಿಕ್ಷಣ ಯಾವುದು ಎಂಬುದರ ಬಗ್ಗೆ ವಿದ್ಯಾರ್ಥಿಗಳಿಗೆ ಮಾರ್ಗ ದರ್ಶನ ಮಾಡಬೇಕು. ಹೀಗೆ ಮಾಡಬೇಕಾದರೆ ಕೇವಲ ಕನ್ನಡಕ್ಕೆ ಅಂಟಿಕೊಂಡು ಕೂತರೆ ಕೂಪಮಂಡೂಕಗಳು ಮಾತ್ರ ಆಗಲು ಸಾಧ್ಯ. ಕನ್ನಡ ಚೆನ್ನಾಗಿ ಕಲಿಯಲಿ, ಜೊತೆಗೆ ಇಂಗ್ಲೀಷ್ ಕೂಡ ಕಡ್ಡಾಯವಾಗಿ ಕಲಿಯಬೇಕು.

ಆಧುನಿಕ ವಿಜ್ಞಾನ ಮತ್ತಿತರ ವಿವಿಧ ಕ್ಷೇತ್ರಗಳ ಉನ್ನತ ಹುದ್ದೆಗಳನ್ನು ಪಡೆಯಬೇಕಾದರೆ ಇಂದು ಇಂಗ್ಲೀಷ್ ಶಿಕ್ಷಣ ಅಗತ್ಯವಾಗಿ ಇರಲೇಬೇಕು. ಆ ಕ್ಷೇತ್ರಗಳು ಅದನ್ನು ಅಪೇಕ್ಷಿಸುತ್ತದೆ. ಕನ್ನಡಿಗರು ಇಂಗ್ಲೀಷ್‌ನಲ್ಲಿ ದುರ್ಬಲವಾಗಿ ಇರುವುದರಿಂದಾಗಿಯೇ ಕನ್ನಡ ವಿದ್ಯಾರ್ಥಿಗಳಿಗೆ ಉನ್ನತ ಹುದ್ದೆಗಳು ಸಿಗುತ್ತಿಲ್ಲ ಎಂಬ ಮಾತು ಇಂದು ಹೆಚ್ಚಾಗಿ ಕೇಳಿ ಬರುತ್ತಿದೆ. ಇಂಗ್ಲೀಷ್ ಒಂದು ಭಾಷೆಯಷ್ಟೆ ಅದನ್ನು ಕಲಿಯುವುದು ಕಷ್ಟವೇನಲ್ಲ. ಹಾಗೆ ನೋಡಿದರೆ ಯಾವುದೇ ಭಾಷೆ ಕಲಿಯುವುದೂ ಕಷ್ಟ ಅಲ್ಲ. ಇಂಗ್ಲೀಷ್ ಕಲಿಯುವು ದರಿಂದ ಉತ್ತಮ ಕೆಲಸ ಸಿಗುತ್ತವೆ ಎನ್ನುವುದಾದರೆ ಭಾಷೆಯಾಗಿ ಇಂಗ್ಲೀಷನ್ನು ಕಲಿಯುವುದರಲ್ಲಿ ತಪ್ಪೇನೂ ಇಲ್ಲ. ಸಾವಿರಾರು ವಿದ್ಯಾರ್ಥಿಗಳು ಶಿಕ್ಷಣ ಪಡೆಯುತ್ತಿರುವ ಈ ಸಂಸ್ಥೆಯಲ್ಲಿ ಅಂಥ ಒಂದು ವ್ಯವಸ್ಥೆಯನ್ನು ಕಲ್ಪಿಸುವುದು ಕಷ್ಟವೇನಲ್ಲ. ವ್ಯಾಕರಣಕ್ಕೆ ತಲೆಕೆಡಿಸಿಕೊಳ್ಳದೆ ತುರ್ತಾಗಿ ಮಾತನಾಡುವ ಇಂಗ್ಲೀಷ್ ಕಲಿಸುವಂಥ ವ್ಯವಸ್ಥೆ ಇಲ್ಲಿ ಮಾಡಬೇಕು. ಕನ್ನಡ ಮಾತನಾಡುವ ವಿದ್ಯಾರ್ಥಿಗಳು ಇಂಗ್ಲೀಷ್ ಬರುವುದಿಲ್ಲ ಎಂಬ ಕೀಳರಿಮೆಯಿಂದ ಮೊದಲು ಹೊರಬರಬೇಕು. ವಿದ್ಯಾರ್ಥಿಗಳಲ್ಲಿ ತಾನೇ ತಾನಾಗಿ ಆತ್ಮವಿಶ್ವಾಸ ಮೂಡುತ್ತದೆ. ಅವರ ಭವಿಷ್ಯಕ್ಕೂ ಒಳ್ಳೆಯದಾಗುತ್ತದೆ.

ಕಂಪ್ಯೂಟರ್ ಕಲಿತರೆ ಅಥವಾ ಕಂಪ್ಯೂಟರ್ ಪದವಿ ಗಳಿಸಿದರೆ ಕೆಲಸ ಸಿಕ್ಕುತ್ತದೆ ಎಂಬ ಭಾವನೆ ವ್ಯಾಪಕ ವಾಗಿ ಹಬ್ಬಿದೆ. ಅದು ಸುಳ್ಳು ಅದರಲ್ಲಿ ಯಾರು ಹೆಚ್ಚು ಅಂಕಗಳಿಸಿದವರಿಗೆ ಮಾತ್ರ ಉದ್ಯೋಗ ಸಿಗುತ್ತಿದೆ. ಉಳಿದವರು ಬಿಪಿಒಗಳಲ್ಲಿ ಪ್ರಾಜೆಕ್ಟ್ ಔಟ್‌ರೀಸೋರ್ಸಿಂಗ್(ಹೊರಗುತ್ತಿಗೆ–ಕಾಲ್ ಸೆಂಟರ್) ಕೂಲಿಗಳಾಗಿ ಕೆಲಸ ಮಾಡುತ್ತಿದ್ದಾರೆ. ಆದ್ದರಿಂದ ಉದ್ಯೋಗ ದೊರಕಿಸಿ ಕೊಡಬೇಕಾದ ಇತರ ಕ್ಷೇತ್ರಗಳಲ್ಲಿಯೂ ವಿದ್ಯಾರ್ಥಿಗಳಲ್ಲಿ ವಿಶೇಷ ಜ್ಞಾನ ತುಂಬಲು ಶಿಕ್ಷಕರು ಮುಂದಾಗಬೇಕು. ಇಂಥ ವಿಶೇಷ ಜ್ಞಾನ ಮಕ್ಕಳಿಗೆ ಕೊಡಬೇಕಾದರೆ ಪ್ರತಿ





ಶಿಕ್ಷಣ ಸಂಸ್ಥೆಯಲ್ಲಿ 'ಜ್ಞಾನದ ಬ್ಯಾಂಕು' ಗಳನ್ನು ತೆರೆಯಬೇಕು. ಎಲ್ಲ ರೀತಿಯ ಸ್ಪರ್ಧಾತ್ಮಕ ಪರೀಕ್ಷೆ ಗಳಿಗೆ ವಿದ್ಯಾರ್ಥಿಗಳನ್ನು ತಯಾರು ಮಾಡುವ ವ್ಯವಸ್ಥೆಯಾಗಬೇಕು. ಈ ಪಠ್ಯಪುಸ್ತಕ ಶಿಕ್ಷಣ ಹಿಂದಕ್ಕೆ ಹೋಗಿ ಅನ್ವಯಿಕ ಕ್ಷೇತ್ರಗಳೇ ಮಹತ್ವ ಪಡೆದಿರುವುದನ್ನು ಶಿಕ್ಷಕರು ಗಮನಿಸಬೇಕು.

ರಾಜ್ಯದಲ್ಲಿ ಹೊಸ ಹೊಸ ಕ್ಷೇತ್ರಗಳು ಮನೆ ಮಾಡುತ್ತಿವೆ. ಹೊರ ರಾಜ್ಯದವರು ಈ ಕ್ಷೇತ್ರಗಳಲ್ಲಿ ದೊರಕಬಹುದಾದ ಉದ್ಯೋಗಗಳನ್ನು ಕಬಳಿಸುತ್ತಿದ್ದಾರೆ. ಕನ್ನಡಿಗರು ನಿರುದ್ಯೋಗಿಗಳಾಗುವುದನ್ನು ತಡೆಯ ಬೇಕಾದರೆ ಶಿಕ್ಷಣ ಸಂಸ್ಥೆಗಳು ಹೊಸ ರೀತಿ ಆಲೋಚಿಸಬೇಕು. ಇದರಲ್ಲಿ ಶಿಕ್ಷಕರ ಪಾತ್ರ ದೊಡ್ಡದು. ವಿದ್ಯಾರ್ಥಿಗಳಲ್ಲಿ ಕನಸುಗಳನ್ನು, ಗುರಿ, ಆದರ್ಶಗಳನ್ನು ಬಿತ್ತುವ ಕೆಲಸವನ್ನು ಶಿಕ್ಷಕರು ಮಾಡಬೇಕು. ಈಗ ವಿದ್ಯಾರ್ಥಿ ಗುರುವಿನ ಸಂಬಂಧ ಹಿಂದಿನಂತಿಲ್ಲ. ಕೋಲು ಹಿಡಿದು ಪಾಠ ಕಲಿಸುವ ಕಾಲ ಎಂದೋ ಹೋಗಿದೆ. ಸ್ನೇಹಿತರಾಗಿ ಶಿಕ್ಷಕರು, ವಿದ್ಯಾರ್ಥಿಗಳಿಗೆ ಜ್ಞಾನವನ್ನು ತುಂಬಬೇಕಿದೆ. ಪ್ರಸಕ್ತ ಸಾಮಾಜಿಕ ವಾತಾವರಣ ಹಾಳಾಗಿರುವುದರಿಂದ ಅದು ವಿದ್ಯಾರ್ಥಿಗಳ ಮೇಲೆಯೂ ಕೆಟ್ಟ ಪರಿಣಾಮ ಬೀರುತ್ತಿದೆ. ಎಷ್ಟೋ ವಿದ್ಯಾರ್ಥಿಗಳು ಗುಂಡಾಗಳಾಗಿ, ಜನಪೀಡಕರಾಗಿ ಪರಿವರ್ತಿತರಾಗಿದ್ದಾರೆ. ಉಜ್ಜೈನಿಯಲ್ಲಿ ಎಬಿವಿಪಿ ವಿದ್ಯಾರ್ಥಿಗಳ ಗುಂಪೊಂದು ಪ್ರಾಧ್ಯಾಪಕರೊಬ್ಬರನ್ನು ಥಳಿಸಿ ಕೊಂದಿದ್ದಾರೆ. ರಾಜಕೀಯ ಪ್ರವೇಶಿಸಲು ವೇದಿಕೆಯಾಗಿರುವ ವಿದ್ಯಾರ್ಥಿ ಸಂಘಗಳ ಚುನಾವಣೆಗಳನ್ನು ರದ್ದು ಮಾಡಿದ್ದೇ ಆ ಪ್ರಾಧ್ಯಾಪಕರಿಗೆ ಮುಳುವಾಗಿದೆ. ಶಿಕ್ಷಕರು ಮತ್ತು ವಿದ್ಯಾರ್ಥಿಗಳ ನಡುವಣ ಸಂಬಂಧ ಎಷ್ಟು ಕೆಟ್ಟಿದೆ ಎನ್ನುವುದಕ್ಕೆ ಇದೊಂದು ಉತ್ತಮ ನಿದರ್ಶನ. ನಿರುದ್ಯೋಗ, ಬಡತನ, ಸಾಮಾಜಿಕ, ಆರ್ಥಿಕ ತಾರತಮ್ಯ ವ್ಯವಸ್ಥೆ ಅವರನ್ನು ಹತಾಶರನ್ನಾಗಿ ಮಾಡಿದೆ. ಹತಾಶರಾಗಿ ಅವರು ಕೆಟ್ಟದಾರಿಗೆ ಇಳಿಯಲು ಕಾರಣ ವಾಗಿದೆ. ವಿದ್ಯಾರ್ಥಿಗಳಲ್ಲಿಯೇ ಅವರಲ್ಲಿ ಉತ್ತಮ ಆದರ್ಶ ಗಳನ್ನು ತುಂಬುವ ಮೂಲಕ ಉತ್ತಮ ಪ್ರಜೆಗಳಾ ಗುವಂತೆ ಮಾಡಬಹುದಾಗಿದೆ.

ನಾನು ಹಳ್ಳಿಯ ಹಿನ್ನಲೆಯಿಂದ ಬಂದವನು. ಬಡತನ, ತಾರತಮ್ಯದ ವಾತಾವರಣದಲ್ಲಿಯೂ ಜ್ಞಾನಾರ್ಜನೆಯ ಮೂಲಕ ಒಂದೊಂದೇ ಹೆಜ್ಜೆ ಮುಂದೆ ಇಟ್ಟವನು. ತಾರತಮ್ಯವಿಲ್ಲದ ಶೋಷಣೆಯಿಲ್ಲದ ಸಮಾಜದ ಕನಸು ಕಟ್ಟಿಕೊಂಡು ಬರೆಯುತ್ತ ಬಂದವನು. ಈ 28 ವರ್ಷಗಳ ಪತ್ರಿಕೋದ್ಯಮದ ಜೀವನದಲ್ಲಿ ನನ್ನ ಕನಸು ಹಾಗೆಯೇ ಉಳಿದಿದೆ. ನನ್ನಂತೆ ದೇಶದ ಲಕ್ಷಾಂತರ ಜನರು ಅಂಥ ಆಸೆಯಿಟ್ಟುಕೊಂಡು ಭ್ರಮನಿರಸನ ಗೊಂಡಿದ್ದಾರೆ. ಭಾರತ, ಭ್ರಷ್ಟಾಚಾರ ಅನ್ಯಾಯ ಶೋಷಣೆಯಿಂದಾಗಿ ಒಳಗೊಳಗೇ ಕುಸಿಯುತ್ತಿದೆ. ಪ್ರಜಾತಂತ್ರ ವ್ಯವಸ್ಥೆ ದಿನೇ ದಿನೇ ವಿಫಲವಾಗುತ್ತಿದೆ. ಪ್ರಜಾತಂತ್ರ ವ್ಯವಸ್ಥೆ ಭದ್ರವಾಗಿ ನೆಲೆಯೂರುವಂಥ, ಸಮಾನತೆಯನ್ನು ಸಾಧಿಸುವಂತಹ ದೊಡ್ಡ ಜವಾಬ್ದಾರಿ ಇಂದಿನ ವಿದ್ಯಾರ್ಥಿಗಳು, ಶಿಕ್ಷಕರ ಮೇಲಿದೆ. ನಾವೆಲ್ಲಾ ಮನಸ್ಸು ಮಾಡಿದರೆ ಇಂದಿಲ್ಲ ನಾಳೆ ಅಂಥ ವ್ಯವಸ್ಥೆಯನ್ನು ಕಟ್ಟಲು ಸಾಧ್ಯ.

ನನ್ನನ್ನು ಇಲ್ಲಿಗೆ ಕರೆಸಿ ನನ್ನ ಅಭಿಪ್ರಾಯಗಳನ್ನು ಹೇಳಲು ಅವಕಾಶ ಮಾಡಿಕೊಟ್ಟ ಸ್ವಾಮೀಜಿಯವರಿಗೆ ಸಂಯುಕ್ತ ವಿದ್ಯಾರ್ಥಿ ಸಂಘ, ಸನಿವಾಸ ವಿದ್ಯಾಸಂಸ್ಥೆಗಳ ಪದಾಧಿಕಾರಿಗಳಿಗೆ, ಸಂಸ್ಥೆಯ ಎಲ್ಲ ಅಧ್ಯಾಪಕರಿಗೆ, ವಿದ್ಯಾರ್ಥಿಗಳಿಗೆ ವಂದನೆಗಳು. *

**ವಚನ**

ಹರಿವ ನದಿಗೆ ಮೈಯೆಲ್ಲ ಕಾಲು
ಉರಿವ ಕಿಚ್ಚಿಗೆ ಮೈಯೆಲ್ಲ ಬಾಯಿ
ಬೀಸುವ ಗಾಳಿಗೆ ಮೈಯೆಲ್ಲ ಕೈ
ಇದು ಕಾರಣ ಗುಹೇಶ್ವರಾ,
ನಿಮ್ಮ ಶರಣಂಗೆ ಸರ್ವಾಂಗವೆಲ್ಲಾ
ಲಿಂಗಮಯವಯ್ಯಾ

– ಶರಣೆ ಅಕ್ಕಮಹಾದೇವಿ

**'ಸಿದ್ಧಗಂಗಾ' ಆಜೀವ ಸದಸ್ಯರಲ್ಲಿ ವಿನಂತಿ**

ನಿಮ್ಮ ವಿಳಾಸ ಬದಲಾದಾಗ ವಿಳಾಸ ದಲ್ಲಿರುವ ನಂಬರ್ ತಪ್ಪದೆ ಸೂಚಿಸಿ. ಈ ಕೆಳಗಿನ ವಿಳಾಸಕ್ಕೆ ಪತ್ರ ಬರೆಯಿರಿ.

ಈ ನಂಬರ್ ಪ್ರತಿಗಳನ್ನು ರವಾನಿಸುವ ಕವರ್ ಮೇಲೆ ಇರುವ ನಿಮ್ಮ ವಿಳಾಸದಲ್ಲಿರುವುದು. ಈ ನಂಬರ್‌ಸ್ಥಿರ ನೆನಪಿನಲ್ಲಿಡಿ.

ಪ್ರಕಾಶಕರು
ಸಿದ್ಧಗಂಗಾ ಮಾಸಪತ್ರಿಕೆ, ಶ್ರೀ ಸಿದ್ಧಗಂಗಾ ಮಠ,
ತುಮಕೂರು– 572 104.

## ಆಚಾರ್ಯದೇವೋಭವ

– ಶ್ರೀಮತಿ ಪ್ರೇಮಾ ಮಲ್ಲಣ್ಣ
'ಶಾಂಭವಿ' ೩ನೇ ರಸ್ತೆ, ಸೋಮೇಶ್ವರ ಪುರಂ, ತುಮಕೂರು -೫೭೨ ೧೦೨.

**ಡಾ॥** ರಾಧಾಕೃಷ್ಣರ ಜನ್ಮದಿನದಂದು ಆಚರಿಪ ಶಿಕ್ಷಕರ ದಿನಾಚರಣೆ
ಗುರುವಂದನೆಯ ಶುಭ ದಿನಾಚರಣೆ.
ಜ್ಞಾನದೀವಿಗೆಯ ಅನಾವರಣೆ ಅಂಧಕಾರದ ನಿವಾರಣೆ
ಗುರುವೆಂದರೆ ಅರಿವಿನ ಬೆಳಕು ಜ್ಞಾನದ ಝಳಕು
ಗುರುವೆ ಚೈತನ್ಯದಗ್ನಿಕಣ, ಅವನೊಂದು ವೇದದ ನಿಧಿಯೆಮಗೆ,
ಗುರುವೆ ಅರುಹಿನಕಿಡಿ, ತತ್ವದ ಸಿಡಿ, ಮುಕ್ತಿಯ ಪಡಿ.

ಗುರು-ಗುರಿ ಎರಡಿರಬೇಕು ಬಾಳಪಥದಲಿ ಸುಲಭದಿ ಪಯಣಿಸಲೆಮಗೆ
'ಗುರು' ಆಚಾರ-ವಿಚಾರಗಳ ಮೌಲ್ಯ ತುಂಬುವನು 'ಗುರಿ' ಮುನ್ನಡೆಸುವುದು ಔನತ್ಯದೆಡೆಗೆ
ಇವೆರಡಿದ್ದ ಕಾಲ ಒಂದಿತ್ತು – ಗುರುಕುಲಗಳಲ್ಲಿ ಗುರುಗಳಿದ್ದರೆಲ್ಲರ ಒಳಿತಿಗಾಗಿ,
ಜ್ಞಾನ, ಸಂಸ್ಕಾರ-ಸಂಸ್ಕೃತಿಗಳನು ನವಪೀಳೆಗೆಗೆ ವರ್ಗಾಯಿಸುವ ಮಣಿಹ ಹೊಂದಿದ್ದರು.
ಸತ್ಯ-ಮಿಥ್ಯಗಳ, ತತ್ವಶೀಲಗಳ, ಅರುಹು-ಮರಹುಗಳ ಆತ್ಮ ಆಧ್ಯಾತ್ಮಗಳ ವಿಚಾರ ಸುಧೆಯನವರು ಉಣಿಸುತ್ತಿದ್ದರು
ಶಿಷ್ಯರಿಗೆ ಗುರುಗಳು ಬ್ರಹ್ಮ-ವಿಷ್ಣು-ಮಹೇಶ್ವರರ ಪ್ರತಿರೂಪವಾಗಿ ತೋರಿದ್ದರು.

ಕಾಲಮುಂದೋಡಿತು, ಹುಲ್ಲು ಹೊದಿಕೆಯ 'ಗುರುಕುಲ'ಗಳೆಂಬ ಗುಡಿಸಲುಗಳಿಗೆ ಬದಲಾಗಿ
ಸಿಮೆಂಟಿನ ಭವ್ಯ ಕಟ್ಟಡಗಳು ಕಂಗೊಳಿಸುತಿವೆ ಶಾಲಾ ಕಾಲೇಜುಗಳು. ದೂರದರ್ಶನ-ಕಂಪ್ಯೂಟರ್‌ನಂಥ
ವೈಜ್ಞಾನಿಕ ಉಪಕರಣಗಳು ಬಂದಿವೆ, ಬರುತಿವೆ ಗುರುವಿಗೆ ಪರ್ಯಾಯವೇನೋ ಎಂಬಂತೆ,
ಸುಖ-ಭೋಗ ತರುವ ಲೌಕಿಕ ಜ್ಞಾನದ ಜಾಲ ಹರಡಿದೆ ಜೇಡನ ಬಲೆಯಂತೆ.
ಶಿಕ್ಷಕರ ಹಿರಿಮೆ-ಗರಿಮೆಗಳು ಕುಗ್ಗತ್ತಲಿವೆ, ಗುರು-ಶಿಷ್ಯರ ಭಾವ-ಬಂಧಗಳು ಮುಖ ತಿರುಗಿಸಿ ನಿಂದಿವೆ.
ಇಬ್ಬರಲು ತೃಪ್ತಿ-ಸಂತೃಪ್ತಿಗಳ ನೆಲೆ ಕಾಣದಾಗಿದೆ.

ಓ ಶಿಕ್ಷಕ ! ಕಳವಳಿಸದಿರು. ಕಲ್ಲಕಡೆದು ಮೂರ್ತಿ ಮಾಡುವ ಶಿಲ್ಪಿ ನೀನೇ ಅಲ್ಲವೆ!
ಗಣತಿ ಕಾರ್ಯಕೆ, ಅಕ್ಷರ ದಾಸೋಹಕೆ, ಅದರಂಕೆ ಸಂಖ್ಯೆಗೆ,
ತ್ರೈಮಾಸಿಕ ಪರೀಕ್ಷೆ ಮತ್ತಿತರ ಪರೀಕ್ಷೆ, ಮೌಲ್ಯಮಾಪನ ಕಾರ್ಯದೊತ್ತಡಕೆ ಸೋಲದಿರು
ನಿನ್ನಧೀ ಶಕ್ತಿಯ ಗಟ್ಟಿಗೊಳಿಸುತ್ತ, ಚತುರ ಬೋಧಕನಾಗಿ, ಮಕ್ಕಳ ಸ್ಫೂರ್ತಿಯ ಸೆಲೆಯಾಗಿ
ಆಧ್ಯಾತ್ಮದ ತಳಹದಿಯ ಮೇಲೆ ವಿಜ್ಞಾನದ ಕಟ್ಟಡವನೆತ್ತರೆತ್ತರಕ್ಕೆ ಕಟ್ಟುವ ಕೆಲಸ ನಿನ್ನದಾಗಲಿ
ಸೇವಾವ್ರತಿಯಾಗು, ಬೋಧನ ವ್ರತಿಯಾಗು, 'ಆಚಾರ್ಯದೇವೋಭವ' ಎಂಬ ಆರ್ಯೋಕ್ತಿಗೆ
ಆದರ್ಶ ವ್ಯಕ್ತಿಯಾಗು, ಶಿಕ್ಷಕನಾಗು.





## ಶರಣ ಶಂಕರ ದಾಸಿಮಯ್ಯನ ಕರ್ಮಭೂಮಿ ಹುನಗುಂದ ಸಮೀಪದ ನವಿಲೆ ಜಡೆಶಂಕರ ದೇವಾಲಯ

– ಜಯದೇವಪ್ಪ ಜೈನಕೇರಿ, 87, ಶಾಂತಲಾ, ಕುವೆಂಪು ರಸ್ತೆ, ಶಿವಮೊಗ್ಗ-1. ದೂ: 08182-271965.

**ಭಾ**ರತ ದೇಶದಲ್ಲಿ ಪ್ರಾಚೀನ ಕಾಲದಿಂದಲೂ, ಶೈವ ಉಪಾಸನೆ ನಡೆದು ಬಂದಿದೆ. ಆಸೇತು ಹಿಮಾಚಲ ವ್ಯಾಪಿಸಿರುವ ಹನ್ನೆರಡು ಜ್ಯೋತಿರ್ಲಿಂಗಗಳು ಈ ಮಾತಿಗೆ ಸಾಕ್ಷಿಯಾಗಿವೆ. ಶಿವಲಿಂಗವನ್ನು ವಿವಿಧ ಹೆಸರುಗಳಿಂದ ವಿವಿಧ ಆಕಾರಗಳಲ್ಲಿ ಪೂಜಿಸುವ ಪದ್ಧತಿ ಇಂದಿಗೂ ಉಳಿದು ಬಂದಿದೆ. ವೇದ ಕಾಲಗಳಿಗಿಂತ ಮುಂಚೆಯೇ ಪ್ರಾರಂಭವಾದ ಶೈವಾರಾಧನೆ, ಶಂಕರಾಚಾರ್ಯರಿಂದ ಮುಂದುವರಿದು ಭಾರತದ ವಿವಿಧ ಧರ್ಮದ ನಂಬಿಕೆಗಳ ಆರಾಧ್ಯ ದೈವವಾಗಿದೆ. ಶಿವಲಿಂಗ ೬೩ ಪುರಾತನರು ಪೂಜಿಸಿದ ಶಿವಲಿಂಗಗಳನ್ನು, ಮುಂದುವರಿದ ವೀರಶೈವರೂ ಪೂಜಿಸಿದರು. ಶೈವದಲ್ಲಿನ ಅನೇಕ ವೈರುಧ್ಯಗಳ ವಿರುದ್ಧ ಹೋರಾಟ ಮಾಡಿದ ಬಸವಣ್ಣನವರು ಪ್ರತಿಯೊಬ್ಬರಿಗೂ ಇಷ್ಟಲಿಂಗದ ಪರಿಕಲ್ಪನೆಯನ್ನು ಕೊಟ್ಟರೂ, ಸ್ಥಾವರಲಿಂಗವಾದ ಕೂಡಲ ಸಂಗಮನ ಆರಾಧಕರಾಗಿ ಕಂಡು ಬರುತ್ತಾರೆ. ೯-೧೩ನೇ ಶತಮಾನಗಳಲ್ಲಿ ಚಾಲುಕ್ಯರು, ರಾಷ್ಟ್ರಕೂಟರು, ಹೊಯ್ಸಳರೂ ಶಿವನ ಆಲಯಗಳನ್ನು ನಿರ್ಮಿಸಿ ಪೂಜಾದಿಗಳನ್ನು ದಾನ ದತ್ತಿಗಳನ್ನು ನೀಡಿರುವ ಉಲ್ಲೇಖಗಳು ಶಾಸನೋಕ್ತವಾಗಿವೆ. ಇಂತಹದೊಂದು ಪ್ರಸಿದ್ಧ ದೇವಾಲಯ ಹುನಗುಂದ ಸಮೀಪ ನವಿಲೆ ಎಂಬ ಗ್ರಾಮದಲ್ಲಿ ಕಂಡು ಬರುತ್ತದೆ. ಪ್ರಾಚೀನವಾಗಿ ಪ್ರಮುಖ ಶೈವ ಕ್ಷೇತ್ರವಾಗಿ ಪ್ರಸಿದ್ಧವಾಗಿದ್ದ ನವಿಲೆ ಈಗ ಒಂದು ಚಿಕ್ಕ ಗ್ರಾಮ. ಉತ್ತರ ಮುಖಿಯಾಗಿ ಹರಿಯುತ್ತಿರುವ ಕೃಷ್ಣಾ ನದಿಯ ಬಲದಂಡೆಯಲ್ಲಿರುವ ಪ್ರಾಚೀನ ದೇವಾಲಯ. 'ಜಡೆಯ ಶಂಕರಲಿಂಗ' ಹೆಸರಿನಿಂದ ಪ್ರಸಿದ್ಧವಾಗಿದೆ. ಕೊಪ್ಪಳ ಜಿಲ್ಲೆಗೆ ಸೇರಿರುವ ನವಿಲೆಯ ಈ ದೇವಾಲಯ ಚಾಲುಕ್ಯ ವಾಸ್ತು ಶೈಲಿಯ ಕಲಾತ್ಮಕ ದೇವಾಲಯವಾಗಿದ್ದು ಈಗ ಕೃಷ್ಣಾ ನದಿಗೆ ಕಟ್ಟಿರುವ ನಾರಾಯಣಪುರ ಜಲಾಶಯದ ಹಿನ್ನೀರಿನಿಂದ ಆವೃತವಾಗಿದೆ. ವರ್ಷದ ಬಹುಪಾಲು ಸಮಯ ಸುಮಾರು ೭-೮ ಅಡಿ ನೀರಿನಲ್ಲಿ ಮುಳುಗಿರುವ ದೇವಾಲಯ ಬಹುಪಾಲು ನಾಶ ವಾಗಿದೆ. ಕೂಡಲಸಂಗಮದಲ್ಲಿ ನಡೆಸಿರುವಂತೆ ಇಲ್ಲಿಯೂ ಸಂರಕ್ಷಣಾ ಕಾರ್ಯವನ್ನು ನಡೆಸಿ ಸಂರಕ್ಷಿಸಬೇಕೆಂಬ ಸ್ಥಳೀಯರ ಬೇಡಿಕೆ ಅರಣ್ಯರೋಧನವಾಗಿದೆ.



ಈಗಲೂ ಮಕರ ಸಂಕ್ರಾಂತಿ ಮತ್ತು ಶಿವರಾತ್ರಿಗಳಂದು ಸಾವಿರಾರು ಭಕ್ತರು ನವಿಲೆ ಜಡೆಶಂಕರ ದೇವಾಲಯದ ಸಮೀಪ ಉತ್ತರವಾಹಿನಿಯಲ್ಲಿ ಸ್ನಾನ ಮಾಡಿ ತಮ್ಮ ಆರಾಧ್ಯದೈವವನ್ನು ಪೂಜಿಸಿ ಧನ್ಯತೆಯನ್ನು ಪಡೆಯುತ್ತಾರೆ. ಇಲ್ಲಿರುವ ಶಾಸನಗಳಲ್ಲಿ ಈ ಸ್ಥಳವನ್ನು 'ತೀರ್ಥಸ್ಥಾನ' ಎಂದು ಉಲ್ಲೇಖಿಸಲಾಗಿದೆ. ನವಿಲೆ ಗ್ರಾಮದ ಪ್ರವೇಶದಲ್ಲಿ 'ಸುಕ್ಷೇತ್ರ ಶ್ರೀ ಜಡೆ ಶಂಕರಲಿಂಗ ದೇವಾಲಯ ನವಿಲೆ' ಎಂಬ ದೊಡ್ಡ ನಾಮ ಫಲಕ ಕಾಣುತ್ತದೆ. ಈಗಿರುವಂತೆ ದೇವಾಲಯವು ನಾರಾಯಣಪುರ ನೀರಾವರಿ ಜಲಾಶಯದ ಮುಳುಗಡೆ ಪ್ರದೇಶದಲ್ಲಿದೆ. ಚಾರಿತ್ರಿಕವಾಗಿ, ಸಾಂಸ್ಕೃತಿಕ ವಾಗಿ ಮತ್ತು ಧಾರ್ಮಿಕ ವಾಗಿ ಇದೊಂದು ಪ್ರಮುಖ ದೇವಾಲಯವಾಗಿದೆ. ಇದನ್ನು ಆದ್ಯತೆಯ ಮೇಲೆ ಸಂರಕ್ಷಿಸಲು ಸರ್ಕಾರ ಮುಂದೆ ಬರಬೇಕಾಗಿದೆ. ಈ ಕಾರ್ಯದಲ್ಲಿ ಸ್ಥಳೀಯರು ರಾಜಕೀಯ ವಾಗಿ ಒತ್ತಡ ತಂದು ವಿಶಿಷ್ಟ ಶಿವಲಿಂಗವಿರುವ ಜಡೆ ಶಂಕರ ಲಿಂಗ ದೇವಾಲಯವನ್ನು ಸಂರಕ್ಷಿಸಬೇಕಾಗಿದೆ.

**ದೇವಾಲಯದ ಪ್ರಾಚೀನತೆ:** ಪ್ರಾಚೀನ ದೇವಾಲಯ ಸುಮಾರು ಒಂದು ಎಕರೆ ಪ್ರದೇಶದಲ್ಲಿ ಚೆಲ್ಲಾಪಿಲಿಯಾಗಿ ಹರಡಿಕೊಂಡಿದೆ. ಪ್ರಾಚೀನ ಮಡಿಕೆ ಚೂರುಗಳು, ಬೂದಿಗುಡ್ಡೆಗಳು, ಶಿಲ್ಪಗಳು, ದೇವಾಲಯದ ವಿವಿಧ ಭಾಗಗಳು ಕಂಡು ಬರುತ್ತವೆ. ಇಲ್ಲಿ ಸಿಕ್ಕಿರುವ ಪ್ರಾಚೀನ ಕುರುಹುಗಳು ಸುಮಾರು ೧೦ರಿಂದ ೧೨ನೇ ಶತಮಾನಕ್ಕೆ ಇತಿಹಾಸ ಸೇರಿದವುಗಳೆಂದು ಇತಿಹಾಸ ವಿದ್ವಾಂಸರಾದ ಡಾ॥ ಅ.ಸುಂದರ ಅವರು

ಗುರುತಿಸಿದ್ದಾರೆ. ಈ ಪ್ರದೇಶದ ಪ್ರಾಚೀನತೆ ಮತ್ತು ಅಂದಿನ ಜನಜೀವನ, ರೀತಿಗಳನ್ನು ಅರಿಯಲು ಪುರಾತತ್ವ ಉತ್ಖನನ ನಡೆಯಬೇಕಾಗಿದೆ. ಇಲ್ಲಿರುವ ಶಾಸನದಿಂದ ಜಡೆಶಂಕರ ದೇವಾಲಯ ಕ್ರಿ.ಶ. ೧೦೧೨ಕ್ಕೂ ಪೂರ್ವದಲ್ಲಿ ನಿರ್ಮಾಣ ವಾಗಿದೆ ಎಂದು ತಿಳಿದು ಬರುತ್ತದೆ. ವಾಸ್ತು ಶೈಲಿಯ ಪ್ರಕಾರ ೧೨ನೇ ಶತಮಾನದ ಚಾಲುಕ್ಯ ಶೈಲಿಯಲ್ಲಿ ನಿರ್ಮಾಣವಾಗಿದೆ. ಇಲ್ಲಿರುವ ಶಾಸನಗಳಲ್ಲಿ ವಿವಿಧ ಕಾಲಘಟ್ಟಗಳಲ್ಲಿ ದೇವಾಲಯಕ್ಕೆ ನೀಡಿದ ದಾನದತ್ತಿಗಳ ವಿವರಗಳಿವೆ. ಜಲಾಶಯ ನಿರ್ಮಾಣದ ನಂತರ ದೇವಾಲಯ ದ ಸುತ್ತ ಇದ್ದ ನವಿಲೆ ಗ್ರಾಮವನ್ನು, ಈಗಿರುವ ಎತ್ತರದ ಪ್ರದೇಶದಲ್ಲಿ ಪುನರ್ ನಿರ್ಮಾಣ ಮಾಡಲಾಗಿದೆ.

**ದೇವಾಲಯ ವಾಸ್ತು ಶಿಲ್ಪ :** ಪೂರ್ವಾಭಿಮುಖವಾಗಿ ನಿರ್ಮಾಣವಾಗಿರುವ ಜಡೆ ಶಂಕರ ದೇವಾಲಯ ಬಹುಪಾಲು ನೆಲಕಚ್ಚಿದೆ. ಲಭ್ಯವಿರುವ ಅಡಿಪಾಯಗಳ ಆಧಾರದ ಮೇಲೆ ಈ ದೇವಾಲಯವು ಗರ್ಭಗುಡಿ, ಅಂತರಾಳ, ಸಭಾಮಂಟಪಗಳಿಂದ ಕೂಡಿತ್ತೆಂದು ತಿಳಿದು ಬರುತ್ತದೆ. ಕಲ್ಯಾಣ ಚಾಲುಕ್ಯ ವಾಸ್ತು ಶೈಲಿಯವೇಸರ ಶೈಲಿಯ ಗೋಪುರ ಗರ್ಭಗೃಹದ ಮೇಲಿದ್ದು ಈಗ ನಾಶವಾಗಿದೆ. ಪೂರ್ವ ಮತ್ತು ದಕ್ಷಿಣ ದಿಕ್ಕಿನಿಂದ ಎರಡು ಪ್ರವೇಶ ದ್ವಾರಗಳಿದ್ದವು. ಕಾಲನ ತುಳಿತಕ್ಕೆ ದೇವಾಲಯದ ವೇಸರ ಶೈಲಿಯ ಗೋಪುರ ಮತ್ತು ಇತರ ಭಾಗಗಳ ಮೇಲ್ಭಾವಣಿ ಸಭಾ ಮಂಟಪ ಮತ್ತು ಮುಖಮಂಟಪಗಳು, ಕಲಾತ್ಮಕ ಸ್ತಂಭಗಳು ನಾಶವಾಗಿದೆ. ದಕ್ಷಿಣ ಭಾಗದ ಮುಖಮಂಟಪದ ಸ್ತಂಭಗಳು, ಗೋಡೆಗಳು ನೆಲಕಚ್ಚಿವೆ. ಗರ್ಭಗುಡಿಯ ಮೇಲಿನ ಗೋಪುರ ಮಾತ್ರ ೧೮ನೇ ಶತಮಾನದಲ್ಲಿ ಸಂರಕ್ಷಣೆಗೊಂಡಿದೆ. ಇಟ್ಟಿಗೆ ಗಾರೆಗಳಿಂದ ನಿರ್ಮಾಣವಾಗಿರುವ ಈ ಭಾಗ ಆದಿಲ್‌ಶಾಹಿ ಶೈಲಿಯಲ್ಲಿ ಕಮಲದಳಗಳಿಂದ ಕೂಡಿದೆ. ಪ್ರಾಚೀನ ವಾಸ್ತು ಶೈಲಿಯ ದೇವಾಲಯದ ಭಾಗಗಳು ಅಲ್ಲಲ್ಲಿ ನೆಲದಲ್ಲಿ ಹರಡಿಕೊಂಡಿದೆ. ಗರ್ಭಗೃಹ ಚಚ್ಚೌಕವಾಗಿದೆ. ಮೂಲೆಗಳಲ್ಲಿ ಸದಾ ಸ್ತಂಭಗಳಿವೆ. ಗರ್ಭಗೃಹದ ಮಧ್ಯೆ ವಿಶಾಲವಾದ ಪಾಣಿ ಪೀಠದ ಮೇಲೆ ಶಿವಲಿಂಗವಿದೆ ಪೀಠದ ಮೇಲ್ಭಾಗ ಕಾಣೆಯಾಗಿದೆ. ಉಳಿದಿರುವ ಪೀಠದ ಮೇಲೆ ಮತ್ತೊಂದು ಪೀಠವನ್ನು ಇರಿಸಿದ 'ಜಡೆಶಂಕರಲಿಂಗ' ವನ್ನು ಕಾಣಬಹುದು. ಶಿವಲಿಂಗದ ಮುಂದಿರುವ ನಂದಿಯು ಕಲಾತ್ಮಕವಾಗಿಲ್ಲ. ೧೭-೧೮ನೇ ಶತಮಾನಕ್ಕೆ ಸೇರಿದ ಈ ಬಸವಣ್ಣ ವಿಗ್ರಹವನ್ನು ೧೮ನೇ ಶತಮಾನದಲ್ಲಿ ಸಂರಕ್ಷಣೆ ಕಾಲದಲ್ಲಿ ಸ್ಥಾಪಿಸಿರಬಹುದು. ಗರ್ಭಗೃಹದ ದ್ವಾರಬಂಧ ಕಲಾತ್ಮಕ ವಾಗಿದೆ. ಎಂಟು ಪಟ್ಟಿಕೆಗಳಿಂದ ಕೂಡಿದೆ. ಪದ್ಮ, ಸಿಂಹ, ದಂಪತಿ, ಲತಾ, ಮಾನುಸ ಮತ್ತು ಎರಡು ಸಾದಾ ಪಟ್ಟಿಕೆಗಳಿವೆ. ದ್ವಾರಬಂಧದ ಹೊಸ್ತಿಲಿನಲ್ಲಿ ಕಮಲವಿದೆ. ಲಲಾಟದಲ್ಲಿ ಗಜಲಕ್ಷ್ಮಿ ಮೂರ್ತಿ ಇದೆ. ಎರಡೂ ಪಕ್ಕಗಳಲ್ಲಿ ಶೈವ ದ್ವಾರಪಾಲಕರು ಮತ್ತು ಚಾಮರಧಾರಿಣಿಯರ ಮೂರ್ತಿಗಳು ಇದೆ.

ಸಭಾಮಂಟಪ ಮತ್ತು ನವರಂಗಗಳು ಒಂಭತ್ತು ಅಂಕಣಗಳಿಂದ ಕೂಡಿದ್ದು ಚಾಲುಕ್ಯ ಮಾದರಿಯಂತೆ ಮಧ್ಯದ ಅಂಕಣ ಸ್ವಲ್ಪ ಎತ್ತರವಾಗಿದೆ. ದಕ್ಷಿಣ ದಿಕ್ಕಿನ ದ್ವಾರಬಂಧವೂ ಗರ್ಭಗುಡಿಯಂತೆಯೇ ಇದೆ. ಗರ್ಭಗೃಹದ ಅಧಿಷ್ಠಾನ, ಅಂತರಾಳ, ಸಭಾಮಂಟಪಗಳು ಜಗತಿಯ ಮೇಲೆ ಇವೆ. ಗರ್ಭಗುಡಿಯ ಮೇಲಿರುವ ಈಗಿನ ಗೋಪುರ ಇಟ್ಟಿಗೆ ಗಾರೆಗಳಿಂದ ನಿರ್ಮಿಸಲಾಗಿದ್ದು ಕಮಲದಳದ ಮೇಲೆ ಗುಂಬಜ್ ಆಕಾರದಲ್ಲಿದೆ ಮೇಲೆ ಪಂಚಲೋಹದ ಕಲಸವಿದೆ. ತುಂಡಾದ ಗಣಪತಿ ಮತ್ತು ಸೂರ್ಯನ ಮೂರ್ತಿಗಳೂ ಸಭಾ ಮಂಟಪದಲ್ಲಿವೆ. ಇನ್ನುಳಿದಂತೆ ಯಾವುದೇ ಮೂರ್ತಿಗಳು ಈಗ ಅಲ್ಲಿ ಕಂಡು ಬರುತ್ತಿಲ್ಲ. ಬೇರೆ ಕಡೆ ಸ್ಥಳಾಂತರಿಸಿರಬಹುದು. ದೇವಾಲಯದ ಹತ್ತಿರ ಎರಡು ಶಾಸನಗಳು ಕಂಡು ಬರುತ್ತವೆ. ಒಂದು ಈಶಾನ್ಯ ದಿಕ್ಕಿನಲ್ಲಿದೆ. ಮತ್ತೊಂದು ಶಾಸನ ಚೌಕಾಕಾರದ ಪೀಠದಂತಿದ್ದು, ವಿಶಿಷ್ಟ ಶೈಲಿಯಲ್ಲಿ ವಾಯುವ್ಯ ದಿಕ್ಕಿನಲ್ಲಿ ನೆಲದ ಮೇಲೆ ಬಿದ್ದಿದೆ.

**ಜಡೆ ಶಂಕರಲಿಂಗ :** ಗರ್ಭಗೃಹದಲ್ಲಿ ವಿಶಾಲವಾದ ಪೀಠದ ಮೇಲೆ ಮೂಲ ಶಿವಲಿಂಗವಿದೆ. ಈ ಶಿವಲಿಂಗದ ಮೇಲೆ ಚಾಲುಕ್ಯ ಶೈಲಿಯ ಕುರುಹುಗಳಾದ ಬ್ರಹ್ಮಸೂತ್ರ, ಊರ್ಧ್ವ ನಾಡಿ, ಪಾರ್ಶ್ವಸೂತ್ರಗಳ ಕೆತ್ತನೆ ಕಂಡು ಬರುತ್ತಿಲ್ಲವೆಂಬುದು ಗಮನಾರ್ಹ ಸಂಗತಿಯಾಗಿದೆ. ಆದರೆ ಈ ಶಿವಲಿಂಗ ದಲ್ಲಿರುವ ಅಪರೂಪದ ವಿಶಿಷ್ಟ ಲಕ್ಷಣವೆಂದರೆ ಶಿವಲಿಂಗದ ನೆತ್ತಿಯ ಮೇಲಿನಿಂದ ಹಿಂಭಾಗದಲ್ಲಿರುವ ಜಡೆ ಎನ್ನಬಹುದು. ಈ ಜಡೆಯು ೧೧ ಗೀರು ಉಬ್ಬು ಶಿಲ್ಪವಾಗಿದೆ. ಈ ರೀತಿ ಜಡೆ ಇರುವ ವಿಶಿಷ್ಟ ಶಿವಲಿಂಗ ತುಂಬ ಅಪರೂಪದ್ದು. ನನ್ನ ಇದುವರೆಗಿನ ಪುರಾತತ್ವ ಸಂಶೋಧನೆ ಯಲ್ಲಿ ನಾನು ಎಲ್ಲಿಯೂ ಕಂಡಿಲ್ಲ ಮತ್ತು ಯಾವುದೇ ಪುರಾತತ್ವ ಗ್ರಂಥಗಳಲ್ಲಿಯೂ ಈ ರೀತಿಯ ಜಡೆ ಇರುವ ಶಿವಲಿಂಗ ಪ್ರಕಟವಾಗಿಲ್ಲ, ಎಂದು ನಾಡಿನ ಖ್ಯಾತ ವಿದ್ವಾಂಸರಾದ ಡಾ|| ಅ.ಸುಂದರ ಅವರು ದಾಖಲಿಸಿದ್ದಾರೆ. ಜಡೆಶಂಕರಲಿಂಗದ ಪ್ರಾಮುಖ್ಯತೆಯನ್ನು ಕ್ರಿ.ಶ. ೧೦೧೪ಕ್ಕೆ ಸಂಬಂಧಿಸಿದ ವಿಶಿಷ್ಟತೆಯನ್ನು ತಿಳಿಸುವ ಸಂಗತಿಗಳು ಇಲ್ಲಿರುವ ಒಂದು ಶಾಸನದಲ್ಲಿ ಶಿವಲಿಂಗ ಜಡೆಯ ಶಂಕರಲಿಂಗವೆಂದು ಪ್ರಸಿದ್ಧವಾಗಿದೆ. ಶಾಸನ ದಲ್ಲಿಯೂ 'ಜಡೆಯ ಶಂಕರಲಿಂಗ' ಎಂದೇ ವಿವರಿಸಲಾಗಿದೆ. ಆದ್ದರಿಂದ ಈ ವಿಶಿಷ್ಟ ಶಿವಲಿಂಗವು ವಾಸ್ತುಶೈಲಿ ಮತ್ತು ವಿಶಿಷ್ಟ ಲಕ್ಷಣಗಳಿಂದ ೯ ಅಥವಾ ೧೦ನೇ ಶತಮಾನದ ಆರಂಭದಲ್ಲಿ ನಿರ್ಮಾಣ ವಾಗಿದೆ ಎನ್ನಬಹುದು. ಈ ದೇವಾಲಯದ ಉತ್ತರ ದಿಕ್ಕಿನಲ್ಲಿ ಒಂದು ಚೌಕಾಕಾರದ ಚಿಕ್ಕಗುಡಿ ಇದೆ. ಇದರಲ್ಲಿ ಕಲ್ಲಿನ ಪಾದುಕೆಗಳಿವೆ. ಎದುರಿಗೆ ಒಂದು ಪುಟ್ಟ ನಂದಿ ವಿಗ್ರಹವೂ ಇದೆ. ಗೋಡೆಗಳ ಮೇಲೆ ಕೆಲವು ಶಿಲ್ಪಕಲೆಯ ಕೆತ್ತನೆಗಳಿವೆ. ಸಂರಕ್ಷಣಾ ಕಾರ್ಯ ನಡೆದಾಗ ಉಳಿದ ಹಲವು ಶಿಲ್ಪಗಳು ತೊಲೆಗಳು ಸ್ಥಂಭಗಳ ಭಾಗಗಳು ಅಲ್ಲಲ್ಲಿ ಹರಡಿಕೊಂಡು ಅನಾಥವಾಗಿ ಬಿದ್ದಿವೆ. ಇಲ್ಲಿರುವ ಶಾಸನದಲ್ಲಿ ಕಂಡುಬರುವಂತೆ ಈ ಪಾದುಕೆಗಳು ರಾಜಗುರು ಭಟ್ಟಾಕರ ಅವರದೆಂದೂ ಇವುಗಳ ಪೂಜೆಗಾಗಿ





ಶಿವಾಚಾರ್ಯರಿಗೆ ಭೂಮಿದಾನ ದತ್ತಿ ನೀಡಲಾಗಿದೆ ಎಂಬ ಉಲ್ಲೇಖಗಳಿವೆ.

**ಶಾಸನಗಳು :** ದೇವಾಲಯ ಪರಿಸರದಲ್ಲಿರುವ ಒಟ್ಟು ಆರು ಕನ್ನಡ ಶಾಸನಗಳು ಕ್ರಿ.ಶ. ೧೦೧೪ರಿಂದ ಕ್ರಿ.ಶ.೧೩೦೮ ರವರೆಗಿನ ಕಾಲಕ್ಕೆ ಸೇರಿವೆ. ಮೇಲೆ ಹೇಳಿದ ಶಿವಲಿಂಗ ಪೀಠದಂತಿರುವ ಚೌಕಾಕಾರದ ಚಪ್ಪಡಿ ಶಾಸನ ಕ್ರಿ.ಶ. ೧೦೧೪ಕ್ಕೆ ಸಂಬಂಧಿಸಿದೆ. (ಶಾಸನ ಸಂಖ್ಯೆ ೨೫) ಕ್ರಿ.ಶ.೧೦೬೬ ಮತ್ತು ಕ್ರಿ.ಶ.೧೧೩೫ರ ಶಾಸನಗಳು ಒಂದೇ ಶಿಲಾ ಫಲಕದಲ್ಲಿ ಕಂಡು ಬರುತ್ತವೆ. ೩ನೇ ಶಿಲಾಫಲಕದಲ್ಲಿ ಕ್ರಿ.ಶ. ೧೧೧೯, ೧೧೨೮ ಮತ್ತು ೧೧೩೫ರ ಶಾಸನಗಳು ಒಟ್ಟಿಗೆ ಸೇರಿವೆ. ಎಲ್ಲ ಶಾಸನಗಳಲ್ಲಿಯೂ ಜಡೆಶಂಕರಲಿಂಗ ಎಂಬ ಉಲ್ಲೇಖ ಕಂಡು ಬರುತ್ತದೆ.

ಎಲ್ಲ ಆರು ಶಾಸನಗಳೂ ಕಲ್ಯಾಣ ಚಾಲುಕ್ಯ ಅರಸರ ಕಾಲಕ್ಕೆ ಸೆರಿವೆ. ಇವುಗಳಲ್ಲಿ ಕ್ರಿ.ಶ. ೧೦೧೪ರ ಶಾಸನ ಮಹತ್ವದ ಸಂಗತಿಗಳನ್ನು ಒಳಗೊಂಡಿದೆ. ಐದನೇ ವಿಕ್ರಮಾದಿತ್ಯ ತ್ರಿಭುವನ ಮಲ್ಲದೇವನ ಆಳ್ವಿಕೆಯಲ್ಲಿದ್ದ ಎರಡನೇ ಜಯಸಿಂಹನು ಎಡತೊರೆ-೨೦೦೦ ನಾಡನ್ನು ಆಳುತ್ತಿದ್ದಾಗ (ರಾಯಚುರು-ಕೊಪ್ಪಳ ಜಿಲ್ಲೆಯ ಭಾಗ) ಕರಡಿಕಲ್ಲಿನ ಶ್ರೀಮತ್ ಜೋಗಿ ಶಿವಾಚಾರ್ಯರು ಹತ್ತು ಮತ್ತರು ಭೂಮಿಯನ್ನು ಆರು ಬಂಗಾರದ ಗದ್ಯಾಣ ಕೊಟ್ಟು ಖರೀದಿಸಿದರೆಂದೂ ಶಾ.ಶ. ೯೩೬ ಆನಂದ ಸಂವತ್ಸರ ವೈಶಾಖ ಶುದ್ಧ ೩ ಸೋಮವಾರ (೫ಏಪ್ರಿಲ್ ೧೦೧೪) ದಂದು ರಾಜಗುರು ಭಟ್ಟಾರಕರ ಪಾದುಕಾ ಪೂಜೆಗಾಗಿ, ಜಯಸಿಂಹನ ರಾಜಗುರುಗಳಿಗೆ ದಾನ ನೀಡಿದನೆಂಬ ಉಲ್ಲೇಖವಿದೆ. 'ಜಡೆಯ ಶಂಕರದೇವ' 'ದಕ್ಷಿಣಾಮೂರ್ತಿ', 'ತೀರ್ಥಸ್ಥಾನ' ಎಂಬ ಉಲ್ಲೇಖಗಳಿವೆ. ಕ್ರಮವಾಗಿ ಎರಡನೇ ಶಾಸನದಲ್ಲಿ (೧೦೬) ಚಾಲುಕ್ಯ ಅರಸು ೧ನೇ ಸೋಮೇಶ್ವರನ ಮನ್ನೆಯ ತ್ರೈಲೋಕ್ಯ ಮಲ್ಲ ನಾಗಧರ್ಮರಸನು ಕರಡಿಕಲ್ಲು ೩೦೦ ನಾಡಿನ ನವಿಲೆ ಗ್ರಾಮದಲ್ಲಿರುವ ಜಡೆಯ ಶಂಕರದೇವರಿಗೆ ಶಾ.ಶ. ವರ್ಷ ೯೮೯ ಆಷಾಡ ಅಮವಾಸ್ಯೆ ಭಾನುವಾರ ದಕ್ಷಿಣಾಯನ ಸಂಕ್ರಾಂತಿ(೨೫-೦೬-೧೦೬೬)ಯಂದು, ದೇವಾಲಯದಲ್ಲಿ ತಪೋಧನರು ರಾಜರ ಪರವಾಗಿ ಇದ್ದ ಕಾಲದಲ್ಲಿ ಚಾಲುಕ್ಯ ಅರಸರ ಮಹಾದಂಡ ನಾಯಕ ಮಾರ ಪೆರುಮಾಳ ದೇವನು ರಾಜರಾಜಚೋಳ ಚಕ್ರವರ್ತಿಯನ್ನು ಸೋಲಿಸಿದ ಸಂಗತಿ ಉಲ್ಲೇಖವಾಗಿದೆ. ಮೂರನೇ ಶಾಸನವು (ಕ್ರಿ.ಶ. ೧೧೧೯) ಆರನೇ ವಿಕ್ರಮಾದಿತ್ಯ ತ್ರಿಭುವನಮಲ್ಲ ಕದಂಬರಸನ ಮಹಾಮಂಡಲೇಶ್ವರನು (೧೮.೧೦.೧೧೧೯) ಜಡೆಯ ಶಂಕರದೇವರ ಆಲಯ ಗೋಪುರಕ್ಕೆ ಬಂಗಾರದ ಕಳಸವನ್ನು ಮಾಡಿಸಿದನೆಂಬ ಸಂಗತಿ ಉಲ್ಲೇಖವಾಗಿದೆ. ಇನ್ನುಳಿದ ಶಾಸನಗಳಲ್ಲಿಯೂ ಜಡೆಯ ಶಂಕರದೇವಾಲಯಕ್ಕೆ ಗ್ರಾಮಗಳನ್ನು, ಭೂಮಿ ಯನ್ನು ದಾನದತ್ತಿ ನೀಡಿದ ಸಂಗತಿಗಳು ಉಲ್ಲೇಖವಾಗಿವೆ.

(ಮುಂದುವರೆಯುತ್ತದೆ)

## ಅಭಿನಂದನೆ



ಶ್ರೀ ಸಿದ್ಧಗಂಗಾ ಮಹಿಳಾ ಕಾಲೇಜಿನಲ್ಲಿ ಗ್ರಂಥಾಧಿಕಾರಿ ಗಳಾಗಿ ಸೇವೆ ಸಲ್ಲಿಸುತ್ತಿರುವ ಶ್ರೀ ಎಸ್.ಎಲ್. ಕಾಡ ದೇವರಮಠ ಅವರು ರಾಜ್ಯ ಕಾಲೇಜು ಗ್ರಂಥಾಧಿಕಾರಿ ಗಳ ಸಂಘದ ಅಧ್ಯಕ್ಷರಾಗಿ ಆಯ್ಕೆಯಾದುದನ್ನು ತಿಳಿದು 'ಸಿದ್ಧಗಂಗಾ' ಸಂತೋಷಿಸುತ್ತದೆ. ಪ್ರೊ. ಕಾಡದೇವರ ಮಠ ಅವರು ಗ್ರಂಥಾಲಯವನ್ನು ಕೇವಲ ಪುಸ್ತಕಗಳ ಸಂಗ್ರಹಾಗಾರವನ್ನಾಗಿಡುವಲ್ಲಿ ತೃಪ್ತರಾಗದೆ 'ಚಿಂತನ-ಮಂಥನ' ಮಂಟಪವನ್ನಾಗಿಸಿರುವುದು ವಿಶಿಷ್ಟವಾದು ದಾಗಿದೆ. ಹಲವು ಹನ್ನೊಂದು ರಾಷ್ಟ್ರೀಯ ಅಂತರ್ ರಾಷ್ಟ್ರೀಯ ವಿಚಾರಗೋಷ್ಠಿಗಳಲ್ಲಿ ಪ್ರಬಂಧ ಮಂಡಿಸಿ ಗ್ರಂಥಾಧಿಕಾರಿಗಳೆಂದರೆ 'ಜ್ಞಾನಚಿಂತಕರು ತಿಳಿವಿನ ತೊರೆಗಳು' ಎಂಬುದನ್ನು ಸ್ಪಷ್ಟಪಡಿಸಿದ್ದಾರೆ. ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಗೆ, ಕಾಲೇಜಿಗೆ ಹೆಮ್ಮೆಯನ್ನ ಬಹುದಾದ 'ಆಸ್ತಿ'ಯಾಗಿರುವ ಶ್ರೀ ಕಾಡದೇವರ ಮಠ ಅವರನ್ನು 'ಸಿದ್ಧಗಂಗಾ' ಅಭಿನಂದಿಸುತ್ತದೆ.

## ವಚನಗಳು

ಭವಿಯ ಕಳೆದೆವೆಂಬ ಮರುಳು ಜನಂಗಳು ನೀವು ಕೇಳಿರೇ. ಭವಿಯಲ್ಲವೇ ನಿಮ್ಮ ತನುಗುಣಾದಿಗಳು? ಭವಿಯಲ್ಲವೇ ನಿಮ್ಮ ಮನ ಗುಣಾದಿಗಳು? ಭವಿಯಲ್ಲವೇ ನಿಮ್ಮ ಪ್ರಾಣಗುಣಾದಿಗಳು? ಇವರೆಲ್ಲರು ಭವಿಗಳ ಹಿಡಿದು ಭವಭಾರಿಗಳಾದರು. ನಾನು ಭವಿಯ ಪೂಜಿಸಿ ಭವಂ ನಾಸ್ತಿಯಾದೆನು ಗೊಹೇಶ್ವರ

-ಅಲ್ಲಮಪ್ರಭು

# ದೇಹವೆಂಬ ದಿವ್ಯರಥ

ಎಂ. ಮಾಧವ ಪೈ, ನಿ. ಪ್ರಾಂಶುಪಾಲರು, 'ಶ್ರೀನಿವಾಸ', ಡಿ.ವಿ.ಎಸ್. ಹೈಸ್ಕೂಲು ಹತ್ತಿರ, ವಿನೋಬಾನಗರ, ಶಿವಮೊಗ್ಗ-೫೭೭ ೨೦೪.

ಮಾನವ ಜೀವಿಗೆ ದೇಹವೆಂಬುದು ಭಗವಂತನು ಅನುಗ್ರಹಿಸಿದ ಮಹಾಪ್ರಸಾದವೆಂದಿದ್ದಾರೆ ಜ್ಞಾನಿಗಳು. ಪೂರ್ವಜನ್ಮದಲ್ಲಿ ಮಾಡಿದ ಪುಣ್ಯದ ಫಲವಾಗಿ ದೇವರ ದಯೆಯಿಂದ ನಮಗೆ ಪ್ರಾಪ್ತವಾದ ಈ ಮಾನವ ದೇಹ ವೆಂಬುದು ನಮ್ಮ ಧರ್ಮಸಾಧನೆಗಾಗಿ ದೊರೆತಿದು ಮಹಾ ಸಾಧನ. ಇದು ಅತ್ಯಮೂಲ್ಯವೂ ಅತಿ ಪವಿತ್ರವೂ ಅತ್ಯಂತ ಶ್ರೇಷ್ಠವೂ ಮಂಗಳಮಯವೂ ಆಗಿದೆಯೆಂಬುದನ್ನು ನಾವು ಎಂದೆಂದೂ ಮರೆಯಬಾರದು. ಇಂತಹ ದೇಹ ನಮಗೆ ಪ್ರಾಪ್ತವಾಗಿದೆಯೆಂದ ಮೇಲೆ ನಾವು ಅದೃಷ್ಟವಂತರೂ ಭಾಗ್ಯಶಾಲಿಗಳೂ ಅಲ್ಲವೇ? ದೊರಕಿದ ಈ ದೇಹ ಸಾಮಾನ್ಯ ವಾದುದೇನೂ ಅಲ್ಲ. ಅದು ದೇವಾಲಯ ಹೇಳಿದ ನುಡಿ ಇದೆಯಲ್ಲವೇ? 'ದೇಹೋ ದೇವಾಲಯೋ ಪ್ರೋಕ್ತಾ' ಮಹಾನುಭಾವಿ ಬಸವಣ್ಣನವರು

*ಉಳ್ಳವರು ಶಿವಾಲಯವ ಮಾಡುವರು*
*ನಾನೇನು ಮಾಡುವೆ ಬಡವನಯ್ಯಾ*
*ಎನ್ನ ಕಾಲೇ ಕಂಬ, ದೇಹವೇ ದೇಗುಲ*
*ಸಿರವೇ ಹೊನ್ನ ಕಳಸವಯ್ಯಾ ಕೂಡಲಸಂಗಮದೇವಾ*
*ಸ್ಥಾವರಕ್ಕಳಿವುಂಟು. ಜಂಗಮಕ್ಕಳಿವಿಲ್ಲ*

ಎಂಬ ತಮ್ಮ ಈ ವಚನದಲ್ಲಿ ದೇಹವನ್ನು ದೇಗುಲವೆಂದು ಸಾರಿದ್ದುಂಟು. ಈ ದೇಹ ದೇಗುಲವನ್ನು ಸುದೃಢವಾಗಿ ಸುಂದರವಾಗಿ ಪಾವಿತ್ರ್ಯದ ನೆಲೆಯಾಗಿ ಉಳಿಸಿಕೊಳ್ಳುವುದು ನಮ್ಮ ಜವಾಬ್ದಾರಿಯಾಗಿದೆ.

ಕಠೋಪನಿಷತ್ತಿನಲ್ಲಿ ನಮ್ಮೀ ದೇಹವನ್ನು ಒಂದು ರಥವೆಂದು ವರ್ಣಿಸಿದ್ದುಂಟು. 'ಆತ್ಮಾನಾಂ ರಥಿನಿಂವಿದ್ಧಿ, ಶರೀರಂ ರಥಮೇವಚ' – ಈ ಶರೀರವೆಂಬುದು ಒಂದು ರಥ, ಆತ್ಮ ಆ ರಥದಲ್ಲಿ ಆಸೀನವಾಗಿರುವ ರಥಿ. ಬುದ್ಧಿ ಈ ರಥವನ್ನು ನಡೆಸುವ ಸಾರಥಿ. ಮನಸ್ಸು ಕಡಿವಾಣ. ಇಂದ್ರಿಯಗಳೆಲ್ಲವೂ ಈ ರಥದ ಕುದುರೆಗಳು. ಶಬ್ದಾದಿ ವಿಷಯಗಳು ಆ ಕುದುರೆಗಳು ಸಾಗುವ ಮಾರ್ಗ ಎಂಬ ಸುಂದರ ರೂಪಕ ಕಲ್ಪನೆಯಿಂದ ವರ್ಣಿಸುದ್ದುಂಟು. ಅಲ್ಲದೆ ಯಾವ ಮನುಷ್ಯನು ವಿವೇಕಿಯಾಗಿ ಇರುತ್ತಾನೋ ಆ ವಿವೇಕಿಗೆ ಮಾತ್ರ ಇಂದ್ರಿಯಗಳೆಂಬ ಕುದುರೆಗಳು ವಶ ವಾಗಿರುತ್ತವೆ ಮತ್ತು ಅವನು ಪರಮಪದ (ದೇವಸಾನ್ನಿಧ್ಯ –ಮೋಕ್ಷ) ಹೊಂದುತ್ತಾನೆ ಎಂದು ಹೇಳಿದ ನುಡಿಗಳು ಚಿಂತನೀಯವಾದವುಗಳಾಗಿವೆ.

ನಮಗೆ ಪ್ರಾಪ್ತವಾದ ಈ ದೇಹವೆಂಬ ರಥ ಯಾವ ಉದ್ದೇಶದಿಂದ ಪ್ರಾಪ್ತವಾಗಿದೆಯೆಂಬುದನ್ನು ನಾವು ಆಲೋಚಿಸ ಬೇಕು. ನಮ್ಮ ಕರ್ಮಗಳೆಲ್ಲ ಚಂದವಾಗಿ, ಸುಗಮವಾಗಿಯೂ ಸುಲಲಿತವಾಗಿಯೂ ಪೂರ್ಣಗೊಳಿಸಿ ಕೊಳ್ಳಲು ಹೋಗ ಬೇಕಾದ ಜಾಗಕ್ಕೆ, ಹತ್ತಿರವಿದ್ದರೆ ಕಾಲ್ನಡಿಗೆ ಯಲ್ಲಿ ಹೋಗ ಬಹುದು, ದೂರವೆಲ್ಲಿಗಾದರೂ ಹೋಗಬೇಕೆಂದಿದ್ದರೆ ನಡೆದು ಹೋಗಲು ಕಷ್ಟ ಸಾಧ್ಯವಾಗುತ್ತದೆ ; ದಿನಗಳು ಹೆಚ್ಚು ಬೇಕಾಗುತ್ತವೆ. ಅದೇ ಒಂದು ವಾಹನವಿದ್ದರೆ ಬೇಗನೇ ಹೋಗಿ ತಲುಪಬಹುದು. ಅಂದ ಮೇಲೆ ವಾಹನದ ಅವಶ್ಯಕತೆ ಎಷ್ಟಿದೆಯೆಂಬುದು ಮನವರಿಕೆ ಯಾಗುತ್ತದೆ. ನಮ್ಮ ಜೀವನ ಯಾತ್ರೆಯಲ್ಲಿ ಅಂತಹ ವಾಹನ ಈ ದೇಹ.

ಬದುಕೆಂಬುದು ಒಂದು ದೀರ್ಘ ಯಾತ್ರೆ. ಈ ಯಾತ್ರೆಯ ಪರಮಲಕ್ಷ್ಯ ಪರಮಪದ ಪ್ರಾಪ್ತಿ ಈ ರೀತಿ ಸಂಪನ್ನವಾಗಿಸುವುದಕ್ಕೆ ಈ ದೇಹರಥವು ಬಹುಪಯೋಗಿ ರಥವಾಗಿ ನಮಗೆ ದೊರೆತಿದೆ.

ಈ ದೇಹದಲ್ಲಿ ದಶೇಂದ್ರಿಯಗಳಿವೆ. ವಾಕ್, ಪಾಣಿ, ಪಾದ, ಪಾಯು ಮತ್ತು ಉಪದ್ಧವೆಂಬ ಐದು ಕರ್ಮೇಂದ್ರಿ ಯಗಳು ಹಾಗೂ ಕಣ್ಣು, ಕಿವಿ, ಮೂಗು, ನಾಲಗೆ, ಮತ್ತು ಚರ್ಮವೆಂಬ ಐದು ಜ್ಞಾನೇಂದ್ರಿಗಳು ಹೀಗೆ ಒಟ್ಟು ಹತ್ತು ಇಂದ್ರಿಯಗಳಿವೆ. ಈ ಹತ್ತು ಇಂದ್ರಿಯಗಳ ಸಹಾಯದಿಂದ ಮಾನವನು ವಿಷಯಾನುಭೋಗವನ್ನು ಪಡೆದು ತನ್ನೆಲ್ಲ ಸುಖಗಳನ್ನು ಅನುಭವಿಸುತ್ತಾನೆ. ಆದರೆ ಅನುಭವಿಸುವ ಸುಖ ಯಾವುದೆಂದರೆ ಭಕ್ತಿ ಭಂಡಾರಿ ಬಸವಣ್ಣನವರು ಹೇಳಿದಂತೆ "ಒಡಲಕಳವಳಿಕೆ ಬಾಯ ಸವಿಗೆ ಬಯಸಿ" ಲೌಕಿಕ ಸುಖವನ್ನು ಅನುಭವಿಸುತ್ತಿರುವುದು. ಇದನ್ನೇ ಬದುಕಿನ ಗುರಿಯೆಂದು, ಇದನ್ನು ಸಾಧಿಸಲೆಂದು ಹೆಣಗಾಡುತ್ತಿರುತ್ತೇವೆ. ಆದರೆ ಈ ದೇಹದಿಂದ ಪಡೆಯ ಬೇಕಾದ ನೈಜ ಸುಖವಿದಲ್ಲ. ಅದು ಪಡೆಯಬೇಕಾದ, ಸಾಧಿಸಬೇಕಾದ ಸುಖದ ನೆಲೆ ಬೇರೆಯೇ ಇದೆಯೆಂಬುದನ್ನು ಮರೆತಿದ್ದೇವೆ.

ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧವೆಂಬ ಈ ಐದು ವಿಷಯಗಳನ್ನು ಕಿವಿ, ಚರ್ಮ, ಕಣ್ಣು, ನಾಲಗೆ ಮತ್ತು ಮೂಗು ಎಂಬ ಇಂದ್ರಿಯಗಳಿಂದ ಅನುಭವಿಸಿ





ಸುಖವೋ ದುಃಖವೋ ಮನುಷ್ಯ ಅನುಭವಿಸುತ್ತಾನೆ. ಒಂದೊಂದು ಇಂದ್ರಿಯವೂ ಅತಿ ಚಂಚಲ ಚಪಲದವ ಗಳಾಗಿದ್ದು. ತಮ್ಮ ತಮ್ಮ ಕಾರ್ಯಗಳನ್ನು ತಮ್ಮ ತಮ್ಮ ಇಚ್ಛೆಗನುಸಾರವಾಗಿ ಮಾಡುತ್ತವೆ. ಈ ಇಂದ್ರಿಯಗಳಿಗೇನೆ ಉಪನೀಷತ್ತಿನಲ್ಲಿ ದುಷ್ಟಾಶ್ವಾ-ದುಷ್ಟ ಕುದುರೆಗಳು ಎಂದು ವರ್ಣಿಸಿರುವುದು. ರಥವು ಗಟ್ಟಿಮುಟ್ಟಾಗಿ ಉತ್ತಮವಾದು ದಿರಬಹುದು. ರಥ ನಡೆಸುವ ಸಾರಥಿಯು ಬುದ್ಧಿವಂತ ನಾಗಿರಬಹುದು. ಸಾಗುವ ದಾರಿಯು ಸುಗಮ ಸಂಚಾರಕ್ಕೆ ಯೋಗ್ಯವಾಗಿರಬಹುದು. ಆದರೆ ಕುದುರೆಗಳು ಅಶಿಕ್ಷಿತ, ಉಪದ್ರವೀ ಸ್ವಭಾವದವುಗಳಾಗಿದ್ದರೆ ಸಾರಥಿಗೆ ಅಪಾಯ ಕಟ್ಟಿಟ್ಟ ಗಂಟು. ಅಂತೆಯೇ ನಮ್ಮ ಇಂದ್ರಿಯಗಳು ದುಷ್ಟಾಶವಸದೃಶದವುಗಳು. ಕುದುರೆ ಗಳನ್ನು ಹಿಡಿತದಲ್ಲಿಟ್ಟು ಕೊಳ್ಳುವುದಕ್ಕೆ ಕಡಿವಾಣ ಹೇಗೆ ಅವಶ್ಯಕವೋ ಇಂದ್ರಿಯ ಗಳನ್ನು ಹಿಡಿತದಲ್ಲಿಟ್ಟುಕೊಳ್ಳಲು ವಿವೇಕವೆಂಬ ಕಡಿವಾಣ ವಿರಬೇಕು. ಲಂಗು-ಲಗಾಮು ಇಲ್ಲದ ದುಷ್ಟ ಕುದುರೆಗಳು ಗುಂಡಿಯಲ್ಲಿ ಬೀಳುವುದು ಮಾತ್ರವಲ್ಲ, ಸವಾರನನ್ನು ಆ ಗುಂಡಿಯಲ್ಲಿ ಉರುಳಿಸುತ್ತವೆಯಲ್ಲವೆ?

ಭಗವಂತನು ನಮಗೆ ವಿವೇಚನಾ ಸಾಮರ್ಥ್ಯವನ್ನು ಕರ್ತವ್ಯಾ ಕರ್ತವ್ಯ ಪ್ರಜ್ಞೆಯನ್ನು ನೀಡಿದ್ದಾನೆ. ಅದನ್ನು ಸರಿಯಾಗಿ ಬಳಸಿಕೊಂಡಾಗ ಮಾತ್ರ ಉಪದ್ರವಿ, ಸ್ವೇಚ್ಛಾಚಾರಿ ಇಂದ್ರಿಯಗಳನ್ನು ಹಿಡಿತದಲ್ಲಿಟ್ಟುಕೊಳ್ಳಬಹುದು. ಹಿಡಿತ ದಲ್ಲಿರುವ ಶಿಕ್ಷಿತ ಕುದುರೆಗಳಿಂದ ನಮ್ಮ ಪ್ರಯಾಣ ಸುಗಮ ಸುಖಕರವಾಗುತ್ತದೋ ಅದೇ ರೀತಿ ವಿವೇಕಯುಕ್ತ ವಾಗಿ ವರ್ತಿಸುವ ಇಂದ್ರಿಯಗಳಿಂದ ನಮ್ಮ ಜೀವನ ಮಾರ್ಗವೂ ಸುಖಮಯವಾಗುತ್ತದೆ. ಆದ್ದರಿಂದ ಸದ್ವಿಚಾರ, ಸದಾಚಾರ, ಭಗವದ್ಭಕ್ತಿ, ಸಾತ್ವಿಕ ಚಿಂತನ, ಸತ್ಸಂಗ, ವೇದ ವೇದಾಂತಾ ನುಸಂಧಾನ, ವಚನೋಪನಿಷತ್‌ಗಳ ಅಧ್ಯಯನ ಮೊದಲಾದ ಸಾಧನಗಳಿಂದ ಮಾನವರಾಗಿರುವ ನಾವು ದುಷ್ಟ-ಉಪದ್ರವಿ ಕುದುರೆಗಳಂತಿರುವ ಉಪದ್ರವಿ ದುಷ್ಟ ಇಂದ್ರಿಯಗಳನ್ನು ಸಾತ್ವಿಕ ಪಥದಲ್ಲಿ ಸಾಗುವಂತೆ ಹಿಡಿತದಲ್ಲಿಟ್ಟುಕೊಂಡಿದ್ದರೆ, ಬಸವಣ್ಣನವರ ಮಾತಿನಲ್ಲಿ ಭಕ್ತ ದೇಹಿಕದೇವನಾಗುವಂತೆ ಮಾಡಿ, ಸಾತ್ವಿಕ ಇಂದ್ರಿಯಗಳಿಂದ ಶಾಶ್ವತ ಸುಖವನ್ನು ಅನುಭವಿಸುವಂತಾಗಲಿ ನಮ್ಮ ಜೀವನ.

ಈ ದೇಹವೆಂಬ ದಿವ್ಯರಥದ ಸಹಾಯದಿಂದ ಮಾನವನು ಹೋಗಿ ತಲುಪಬೇಕಾದ ಲಕ್ಷ್ಯವೆಂದರೆ ಮೋಕ್ಷ, ಭಗವಂತನ ಸಾನ್ನಿಧ್ಯ. ಭಗವಂತನ ಆ ಸಾನ್ನಿಧ್ಯವನ್ನು ಪಡೆಯಲು ಈ ದೇಹವೊಂದು ಸಾಧನವೇ ಹೊರತು ಈ ದೇಹವೇ ನಾವು ಅಲ್ಲ. ಯಾವುದೇ ಒಂದು ವಾಹನವನ್ನು ಉತ್ತಮ ರೀತಿಯಲ್ಲಿ ಬಳಸಿಕೊಳ್ಳುವವನೇ ಬುದ್ಧಿವಂತ ಜ್ಞಾನಿ. ಈ ವಾಹನವೇ ನಾನು ಎಂದು ತಿಳಿದವನು, ತಿಳಿಯುವವನು ಮೂರ್ಖನಲ್ಲದೆ ಇನ್ನಾರು? ಆದುದರಿಂದ ದೇವನ ಅನುಗ್ರಹದಿಂದ ನಮಗೆ ಪ್ರಾಪ್ತವಾದ ಈ ದೇಹವೆಂಬ ದಿವ್ಯರಥಕ್ಕೆ ಉತ್ತಮ ರೀತಿಯಿಂದ, ಚಂದವಾಗಿ ರಕ್ಷಿಸಿ, ಉಪಯೋಗಿಸಿಕೊಂಡು ನಾವು ಭಗವಂತನ ಸಾನ್ನಿಧ್ಯವನ್ನು ಪಡೆದು ಜನ್ಮ ಸಾರ್ಥಕಮಾಡಿಕೊಂಡು ಉದ್ಧಾರ ಆಗೋಣ. ಮನಸ್ಸು ಬಯಸಿದಂತೆ, ಬಾಯಿ ರುಚಿಗಾಗಿ ಸಿಕ್ಕಿದನ್ನೆಲ್ಲ ತಿಂದು, ಇಂದ್ರಿಯಗಳಿಗಾಗಿ, ಸಿಕ್ಕಿದನ್ನೆಲ್ಲಾ ಅನುಭವಿಸಿ ಆರೋಗ್ಯವನ್ನೇ ಒತ್ತಿ ಇಟ್ಟು, ದೇಹವನ್ನು ರೋಗನಿಲಯವನ್ನಾಗಿ ಮಾಡಿಕೊಂಡರೆ ಜನ್ಮ ಸಾರ್ಥಕಮಾಡಿಕೊಳ್ಳುವುದೆಂಬುದು ಬರಿಯ ಕನಸಾಗಿ ಉಳಿದೀತು. ಆದ್ದರಿಂದ ಇಂದ್ರಿಯಗಳೆಂಬ ಕುದುರೆಗಳನ್ನು ಹಿಡಿತದಲ್ಲಿಟ್ಟುಕೊಳ್ಳುವುದನ್ನು ಮೊದಲು ಮಾಡಬೇಕಾದ ಕಾರ್ಯವಾಗಿದೆ. ಅವು ಬಸವಣ್ಣನವರು ಎಂದಂತೆ

*ಒಂದು ಮೊಲಕ್ಕೆ ನಾಯನೊಂಭತ್ತು ಬಿಟ್ಟಂತೆ.*
*'ಎನ್ನ ಬಿಡು, ತನ್ನ ಬಿಡೆಯೆಂಬುದು ಕಾಯವಿಕಾರ*
*'ಎನ್ನಬಿಡು, ತನ್ನ ಬಿಡೆಂಬುದು ಮನೋವಿಕಾರ*
*ಕರಣೇಂದ್ರಿಯಗಳೆಂಬ ಸೊಣಗಮುಟ್ಟದ ಮುನ್ನ*
*ಮನ ನಿಮ್ಮನೆಯ್ದುವುದೆ ಕೂಡಲಸಂಗಮದೇವ.*

ಸದಾ ಚಿಂತಿಸಿ, ನವನಾಯಿಗಳನ್ನು ಹಿಡಿತದಲ್ಲಿಟ್ಟು ಸಾಗಿದರೆ ಮಾತ್ರ ಅಂಗ ಲಿಂಗವಾಗಿ ಧನ್ಯತೆಯನ್ನು ಪಡೆದೀತು.

'ಶರೀರಮಾದ್ಯಂ ಖಲು ಧರ್ಮಸಾಧನಂ' ಎಂಬೊಂದು ಉಕ್ತಿ ಇದೆ. ಈ ಉಕ್ತಿಯೇ ದೇಹದ ಮಹತ್ವವನ್ನು ಸಾರಿ ಹೇಳುತ್ತಿದೆ. ಬದುಕಿನ ಗುರಿಯನ್ನು ಸಾಧಿಸಲು ಬೇಕಾದುದೇ ದೇಹ. ಈ ದೇಹವನ್ನು ನಿರ್ಲಕ್ಷ್ಯ ಮಾಡಿದೆವೆಂದಾದರೆ, ನಾವು ಏನನ್ನೂ ಸಾಧಿಸಲಾಗದೆ, ಬದುಕಿದ್ದರೂ ಸತ್ತಂತೆಯೇ ಇದ್ದು ಬದುಕು ಸವೆಸಬೇಕಾಗಿ ಬರುತ್ತದೆಯೆಂಬುದಂತು ಎರಡಿಲ್ಲದ ಮಾತು. ಹೀಗಿರುವಾಗ ನಮಗೆ ದೊರೆತಿರುವ ದಿವ್ಯರಥ ಸದೃಶ ಈ ದೇಹವನ್ನು ಲಿಂಗವಾಗಬೇಕಾದ ಈ ಅಂಗವನ್ನು ಆರೋಗ್ಯ ವಂತ ಸುದೃಢಕಾಯವಾಗಿ ಉಳಿಸಿ ಕೊಳ್ಳಬೇಕಾದುದು ನಮ್ಮ ಧರ್ಮವಾಗಿದೆ. ಈ ಧರ್ಮದಿಂದ ನಾವು ಚ್ಯುತರಾದರೆ ಪರಮಪದಪ್ರಾಪ್ತಿಯೆಂಬ ಗುರಿಸಾಧಿಸ ಬೇಕಾದ ಈ ದೇಹ ನರಕ ಸಾಧನೆಗೆ ಕಾರಣವಾಗುತ್ತದೆ. ಹೀಗಾಗದಂತೆ ಎಚ್ಚರ ವಹಿಸಿ ದಿವ್ಯರಥವನ್ನಾಗಿಸಿ, ಪವಿತ್ರ ದೇಗುಲವಾಗಿಸಿ ಸಾರ್ಥಕತೆಯನ್ನು ಹೊಂದಲು ಶ್ರಮಿಸು ವುದು ಪ್ರತಿಯೊಬ್ಬ ಮಾನವನ ಆದ್ಯ ಧರ್ಮವಾಗಿದೆ.

## ಇದು ಕಲಿತವರ ಕಾಲವೇ? – ಮುಂದುವರೆದ ಭಾಗ

– ಗೊ.ರು. ಚನ್ನಬಸಪ್ಪ, ೪೦೬, ಪ್ರಣಾಮ, ಎಫ್ ರಸ್ತೆ, ರಾಜರಾಜೇಶ್ವರಿನಗರ, ಬೆಂಗಳೂರು–೫೬೦ ೦೯೮.

ಶಬರಿಮಲೈ ಪ್ರಕರಣ ಈಗ ಸಾಕಷ್ಟು ಚರ್ಚೆಗೊಳಗಾಗಿದೆ. ಅಯ್ಯಪ್ಪಸ್ವಾಮಿ ದೇವಾಲಯದ ಆಡಳಿತ ನೋಡಿಕೊಳ್ಳುತ್ತಿರುವ ತಿರುವಾಂಕೂರು ದೇವಸ್ವಂ ಮಂಡಳಿಯು, ಇತ್ತೀಚೆಗೆ ನಡೆದ 'ದೇವಪ್ರಸನಂ' (ದೇವರ ಸಂಕಲ್ಪದ ಜ್ಯೋತಿಶ್ಶಾಸ್ತ್ರದ ಆವಾಹನೆ) ಶಾಸ್ತ್ರ ಸಂದರ್ಭದಲ್ಲಿ ಪ್ರಕಟವಾದ ಅಂಶಗಳನ್ನು ಕುರಿತು ಚರ್ಚಿಸಿ, ತಪ್ಪು ಘಟನೆ ನಡೆದಿದ್ದಲ್ಲಿ ಸೂಕ್ತ ಕ್ರಮ ಕೈಗೊಳ್ಳುವುದಾಗಿ ತಿಳಿಸಿದ್ದು, ಜಯಮಾಲಾ ಅವರಿಗೆ ಭಾರಿ ದಂಡ ವಿಧಿಸುವ ಬಗೆಗೆ ಆಲೋಚಿಸುತ್ತಿದೆಯಂತೆ. ಎಂತಹ ಅದ್ಭುತ ಆಲೋಚನೆ! ಕಳೆದ 16 ವರ್ಷಗಳಲ್ಲಿ ನಡೆದ 'ದೇವಪ್ರಸನಂ'ನಲ್ಲಿ ಪ್ರಕಟ ವಾಗದ 'ಗರ್ಭಾಂಕಣದಲ್ಲಿ ಮಹಿಳೆಯ ಪ್ರವೇಶ'ದ ಅಂಶ ಇದ್ದಕ್ಕಿದ್ದಂತೆ ಹೇಗೆ ಪ್ರಕಟವಾಯಿತು? ಇದುವರೆಗೆ ಅಯ್ಯಪ್ಪ ನಿಗೆ ಆಗದ ಅಸಮಾಧಾನ ಈಗ ಆದುದು ಹೇಗೆ? ದೇವಾಲಯದ ನಿಯಮಗಳ ಉಲ್ಲಂಘನೆಗೆ ತಕ್ಕ ಶಿಕ್ಷೆ ವಿಧಿಸ ಬೇಕೆಂದು ಹೇಳುವ ಆಡಳಿತ ಮಂಡಳಿಯವರೇ 'ಪೂಜಾರಿಗೆ ಮಾತ್ರ ಅವಕಾಶವಿರುವ ಸ್ಥಳಕ್ಕೆ ತಾನು ಹೋಗಿದ್ದೆ ಎಂದು ಹೇಳುವ ನಟಿಯ ಮಾತನ್ನು ನಂಬುವುದು ಕಷ್ಟ' ಎಂದೂ ಹೇಳಿದ್ದಾರೆ. 'ದೇವರ ಮೂರ್ತಿಯನ್ನು ಸಾರ್ವಜನಿಕ ಪ್ರದೇಶ ದಿಂದ ಪ್ರತ್ಯೇಕವಾದ ಸ್ಥಳದಲ್ಲಿಡಲಾಗಿದೆ. ಒಂದು ವೇಳೆ ಸಾಲಿನಲ್ಲಿರುವ ದರ್ಶನಾಕಾಂಕ್ಷಿಗಳು ಆತುರದಲ್ಲಿ ಮುಂದಿರುವ ಯಾರನ್ನಾದರೂ ತಳ್ಳಿದರೂ ವಿಗ್ರಹದ ಬಳಿ ಬೀಳಲಾಗು ವುದಿಲ್ಲ. ಏಕೆಂದರೆ ಅದು ಅಷ್ಟು ದೂರದಲ್ಲಿರುತ್ತದೆ' ಎಂಬುದೂ ಅವರ ಹೇಳಿಕೆಯೇ.

ಇದಕ್ಕೂ ಮುಂಚಿನ 'ದೇವಪ್ರಸನಂ'ನಲ್ಲಿ (ಈ ಹಿಂದೆ 2002ರಲ್ಲಿ ನಡೆದಿತ್ತು) ಮಹಿಳೆಯೊಬ್ಬಳ ಈ ಅಕ್ರಮ ಪ್ರವೇಶದ ಪ್ರಸ್ತಾಪವಾಗದಿರಲು ಕಾರಣವೇನೆಂದು ವರದಿಗಾರರು ಕೇಳಿದಾಗ, ಆಡಳಿತ ಮಂಡಳಿಯ ಸಚ್ಚಿದಾನಂದನ್ ಎಂಬುವರು 'ಹಿಂದಿನ ಆಚರಣೆಗಳಲ್ಲಿ ಇತರ ವಿಷಯಗಳ ಬಗೆಗೆ ದೇವರ ದೃಷ್ಟಿಯನ್ನು ತಿಳಿದುಕೊಳ್ಳುವುದು ಉದ್ದೇಶವಾಗಿತ್ತು. ಏನೇ ಇದ್ದರೂ, ಇದು ತಂತ್ರಿಗಳು(ಪೂಜಾರರು) ಮತ್ತು ಅಂಗೀಕೃತ ಜ್ಯೋತಿಷಿಗಳು ನಿರ್ವಹಿಸಬೇಕಾದ ಪ್ರಕರಣವಾದ್ದರಿಂದ ನಾನು ಉತ್ತರಿಸಲಾಗುವುದಿಲ್ಲ ಎಂದರಂತೆ'.

ಈ ಮಧ್ಯೆ ಮಹಿಳೆಯರು ಅಯ್ಯಪ್ಪಸ್ವಾಮಿ ದೇವಾಲಯ ಪ್ರವೇಶಿಸಿದ ಬಗ್ಗೆ ಒಂದಾದ ಮೇಲೊಂದರಂತೆ ಸುದ್ದಿಗಳು ಬರುತ್ತಲೇ ಇವೆ. ಕನ್ನಡದ ಇನ್ನೊಬ್ಬ ನಟಿ ಗಿರಿಜಾ ಲೋಕೇಶ್, ಕೇರಳದ ನೃತ್ಯ ಕಲಾವಿದೆ ಸುಧಾಚಂದ್ರನ್, ಚಿತ್ರನಟ ಶ್ರೀನಿವಾಸಮೂರ್ತಿ ಪತ್ನಿ ಪುಷ್ಪಾ ಮುಂತಾದವರೆಲ್ಲ ದೇವಾಲಯಕ್ಕೆ ಹೋಗಿ ಅಯ್ಯಪ್ಪಸ್ವಾಮಿ ದರ್ಶನ ಪಡೆದಿರುವುದಾಗಿ ಹೇಳಿದ್ದಾರೆ. ಈ ಒಬ್ಬೊಬ್ಬರದೂ ಒಂದೊಂದು ಬಗೆಯ ಪ್ರವೇಶ ಸಂಗತಿ.

**ಜಯಮಾಲಾ** : ನನಗೆ ದೇವರ ಬಗೆಗೆ ನಂಬಿಕೆಯಿದೆ. ಇಪ್ಪತ್ತು ವರ್ಷಗಳ ಹಿಂದೆ ನನ್ನ ಗಂಡನ ಕಾಲಿನ ತೊಂದರೆಯಿತ್ತು. ಓರ್ವ ಮುದುಕಿಯ ಸಲಹೆಯಂತೆ ಶಬರಿಮಲೈಗೆ ಹೋದೆವು. ಆಗ ಯಾರೂ ತಡೆಯಲಿಲ್ಲ. ಆದರೆ ಭಕ್ತರ ಸಂದಣಿಯಲ್ಲಿ ಒಬ್ಬರಿಗೊಬ್ಬರು ನೂಕಾಡುವಾಗ ಸಾಲಿನ ಮುಂಭಾಗದಲ್ಲಿದ್ದ ನಾನು ಮುಂದಕ್ಕೆ ಬೀಳಬೇಕಾಯಿತು. ಆಗ ಸಹಜವಾಗಿಯೇ ಅಯ್ಯಪ್ಪಸ್ವಾಮಿಯ ಮೂರ್ತಿಯ ಪಾದ ಸ್ಪರ್ಶ ಮಾಡಿದೆ. ಅದೊಂದು ಆಕಸ್ಮಿಕ.

**ಸುಧಾ ಚಂದ್ರನ್** : 1989ರಲ್ಲಿ ಚಿತ್ರವೊಂದರ ಸಂದರ್ಭ. ಆಗ ನಾನೂ ಇತರ ಮೂವರು ಮಹಿಳೆಯರೊಂದಿಗೆ ಕೋವಿಲ್(ಗರ್ಭಗುಡಿ)ಗೆ ಹೋಗಿದ್ದೆ. ಆಗ ಆ ಚಿತ್ರೀಕರಣ ಒಂದು ಕಾನೂನು ಪ್ರಕರಣವಾಗಿ, ಕೇರಳ ಮುಖ್ಯ ನ್ಯಾಯಾಲಯವು ದೇವಾಲಯದ ಹತ್ತಿರ ಮಹಿಳೆಯರನ್ನು ಬಿಡುವ ಬಗ್ಗೆ ಬಿಗಿಯಾದ ಜಾಗ್ರತೆ ಕ್ರಮ ಕೈಗೊಳ್ಳಬೇಕೆಂದು ದೇವಾಲಯದ ಆಡಳಿತಕ್ಕೆ ತಿಳಿಸಿತು. ಆನಂತರ ಅಲ್ಲಿ ಮಹಿಳಾ ಪೋಲೀಸರನ್ನು ಕಾವಲಿಗೆ ಹಾಕಲಾಯಿತು. ಅಲ್ಲಿಂದ 10 ರಿಂದ 50 ವಯಸ್ಸಿನ ಯಾವ ಮಹಿಳೆಯರನ್ನೂ ಶಬರಿಮಲೈ ಬುಡದಲ್ಲಿರುವ ಪಂಪಾದ ಆಚೆಗೆ ಬಿಡುತ್ತಿರಲಿಲ್ಲ.

**ಗಿರಿಜಾ ಲೋಕೇಶ್** : ಕೆಲವು ವರ್ಷಗಳ ಹಿಂದೆ ನಾನೂ ನನ್ನ ಮಕ್ಕಳ ಜೊತೆಗೆ ಹೋಗಿದ್ದೆ. ಆದರೆ ಗರ್ಭಗುಡಿಗೆ ನಮ್ಮನ್ನು ಬಿಡಲಿಲ್ಲ ದೂರದಿಂದಲೇ ದರ್ಶನಮಾಡಿಕೊಂಡು ಬಂದೆವು.

**ಶ್ರೀನಿವಾಸಮೂರ್ತಿ** : ನನ್ನ ಪತ್ನಿ 1991ರಲ್ಲಿ ಅಯ್ಯಪ್ಪಸ್ವಾಮಿ ದರ್ಶನ ಮಾಡಿದ್ದಾಳೆ. ಹದಿನೆಂಟು ಮೆಟ್ಟಿಲು ಬಳಿ ಹೋದಾಗ, 'ಅಲ್ಲಿಂದ ಮುಂದಕ್ಕೆ ಮಹಿಳೆಯರಿಗೆ ಪ್ರವೇಶ ನಿಷೇಧ' ಎಂದು ತಂತ್ರಿಗಳು ಹೇಳಿದರು. ಮನವಿ ಮಾಡಿಕೊಂಡದ್ದು ವಿಫಲವಾಯಿತು. ಕೆಳಗೆ ನಿಂತೇ ನನ್ನ ಪತ್ನಿ ಅಯ್ಯಪ್ಪನ ದರ್ಶನ ಮಾಡಿದಳು. ನಾನೂ ಮತ್ತು ಮಕ್ಕಳು ಮಾತ್ರ ಗರ್ಭಗುಡಿಗೆ ಹೋಗಿ ದರ್ಶನ ಪಡೆದವು.





ಇಷ್ಟೆಲ್ಲಾ ಇದ್ದರೂ ಜಯಮಾಲಾ ಪ್ರವೇಶದ ಪ್ರಕರಣ ಇದ್ದಕ್ಕಿದ್ದಂತೆ ಈಗ ವಿವಾದಕ್ಕೆ ಎಡೆ ಮಾಡಿರುವುದು ಒಂದು ವಿಪರ್ಯಾಸ; ವಿಚಿತ್ರ. ಜಯಮಾಲಾ ಅವರ ಜ್ಯೋತಿಷ್ಕನೊಬ್ಬ 'ನೀವು ತಪ್ಪು ಮಾಡಿದ್ದೀರಿ. ಇದು ಪ್ರಾಯಶ್ಚಿತ್ತಕ್ಕೆ ಸೂಕ್ತ ಕಾಲ' ಎಂದನಂತೆ. ಭಾವುಕಳಾದ ಜಯಮಾಲಾ ದೇವಾಲಯದ ಪ್ರಧಾನ ತಂತ್ರಿ ಹೆಸರಿಗೆ ತಪ್ಪೊಪ್ಪಿಗೆ ಪತ್ರ ಫ್ಯಾಕ್ಸ್ ಮಾಡಿಬಿಟ್ಟರು. ಅದು ತನ್ನ ವೈಯಕ್ತಿಕ ವಿಷಯವೆಂದು ಭಾವಿಸಿದ್ದರು. ಆದರೆ ದೇವಾಲಯದ ತಂತ್ರಿ ಆ ಪತ್ರವನ್ನು ಮಾಧ್ಯಮದವರ ಗಮನಕ್ಕೆ ತಂದ. ಸರಿ, ಪ್ರಕರಣಕ್ಕೆ ಸಾರ್ವಜನಿಕ ಸ್ವರೂಪ ಬಂದೇ ಬಿಟ್ಟಿತು.

ಎಲ್ಲರೂ ಜಯಮಾಲಾ ಕಡೆ ತಿರುಗಿ 'ವಾಸ್ತವ' ಸಂಗತಿ ತಿಳಿಯಲು ಆರಂಭಿಸಿದರು. ಮಾಧ್ಯಮದವರಿಗಂತು ಒಳ್ಳೆಯ ಗ್ರಾಸ ಸಿಕ್ಕಿತು. ಬೇಸತ್ತ ಜಯಮಾಲಾ, 'ನನ್ನ ತಪ್ಪಿಗೆ ಕ್ಷಮೆ ಕೇಳಿರುವುದು ನಿಜ, ಆದರೆ ಅದು ಭಗವಂತನಲ್ಲಿ ಮಾತ್ರ, ನಾನು ಯಾವನೇ ತಂತ್ರಿಯಲ್ಲಿ ಕ್ಷಮೆ ಯಾಚಿಸುವುದಿಲ್ಲ. ಅದು ಅವರದೇ ತಪ್ಪು, ಮಾಧ್ಯಮದ ಬಳಿ ಹೋಗುವುದಿಲ್ಲವೆಂದು ನನಗೆ ಭಾಷೆ ಕೊಟ್ಟು ವಿಶ್ವಾಸ ದ್ರೋಹ ಮಾಡಿದ್ದಾರೆ. ನಾನು ದೇವರನು ಮುಟ್ಟಿರುವುದು ನಿಜ. ಅದು ಸುಳ್ಳೆಂದು ಅವರು ಹೇಗೆ ಹೇಳುತ್ತಾರೆ? ನಾನು ಬೇಕಾದರೆ ನಕ್ಷೆ ಹಾಕಿ ತೋರಿಸುತ್ತೇನೆ. ಅವರು ನನ್ನ ವಿರುದ್ಧ ಕಾನೂನು ಕ್ರಮ ಕೈಗೊಂಡರೆ ಅದನ್ನು ದೇವರಿಗೆ ಬಿಡುತ್ತೇನೆ. ನಾನು ಮಾಡಿದ ಒಂದೇ ಒಂದು ತಪ್ಪೆಂದರೆ ನನ್ನ ಲೆಟರ್ ಹೆಡ್ಡಿನಲ್ಲಿ ತಪ್ಪೊಪ್ಪಿಗೆ ಪತ್ರ ಕೊಟ್ಟಿದ್ದು. ನಾನು ಅಷ್ಟು ಪ್ರಾಮಾಣಿಕಳಾಗಬಾರದಿತ್ತು ಎಂದು ಈಗ ಅನಿಸುತ್ತದೆ' ಎಂದು ಹೇಳಿರುವುದು ಪತ್ರಿಕೆಗಳಲ್ಲಿ ಪ್ರಕಟವಾಗಿದೆ.

ಈಗ ಉನ್ನಿಕೃಷ್ಣನ್ ಎಂಬ ಜ್ಯೋತಿಷಿ ದೇವಾಲಯವನ್ನು ಅಪವಿತ್ರಗೊಳಿಸುವವರಿಗೆ ಶಿಕ್ಷೆಯಾಗಬೇಕೆಂದು ಹೇಳಿದ್ದಾರೆ. ಇನ್ನೊಬ್ಬ ಜ್ಯೋತಿಷಿ ಜಯಕುಮಾರ ಎಂಬಾತ ಅಯ್ಯಪ್ಪಸ್ವಾಮಿ ಗುಡಿಯಲ್ಲಿ ಈಚೆಗೆ ನಡೆದ 'ದೇವಪ್ರಸನಂ' ಪುನಃ ನಡೆಯಬೇಕೆಂದು ಕೇರಳ ಹೈಕೋರ್ಟಿನಲ್ಲಿ ಅರ್ಜಿ ಸಲ್ಲಿಸಿದ್ದಾರೆ. ಈ ಅರ್ಜಿಯನ್ನು ಅಂಗೀಕರಿಸಿರುವ ಹೈಕೋರ್ಟು ತಿರುವಾಂಕೂರು ದೇವಸ್ವಂ ಮಂಡಳಿಗೆ ನೋಟೀಸ್ ಜಾರಿ ಮಾಡಿದೆ. ಅಲ್ಲೀಗ ವಿಚಾರಣೆ ನಡೆಯಬೇಕಾಗಿದೆ. ಈ ಮಧ್ಯೆ ದೇವಸ್ವ ಮಂಡಳಿಯ ಒಂದು ತಂಡ ಜಯಮಾಲಾ ಅವರ ಹೇಳಿಕೆ ಪಡೆಯಲು ತಿರುವಾಂಕೂರಿ ನಿಂದ ಬೆಂಗಳೂರಿಗೆ ಬಂದು ಅದು ಸಾಧ್ಯವಾಗದೆ ಹಿಂತಿರುಗಿತೆಂದು ಪತ್ರಿಕೆಗಳು ತಿಳಿಸಿವೆ.

'ಅಪವಿತ್ರ' ಗೊಂಡಿರುವ ಅಯ್ಯಪ್ಪಸ್ವಾಮಿಯ ಶುದ್ಧೀಕರಣ ಪ್ರಯತ್ನ ನಡೆದಿರುವಂತೆಯೇ ಪತ್ರಿಕೆಗಳಲ್ಲಿ ಮತ್ತೊಂದು ಸುದ್ದಿ ಕಾಣಿಸಿಕೊಂಡಿದೆ. ಅದೆಂದರೆ ಕೇರಳದ ಇನ್ನೊಬ್ಬ ನಟಿ ಮೀರಾ ಜಾಸ್ಮಿನ್ ಅವರು ತಳಿಪರಂಬ ಎಂಬಲ್ಲಿನ ರಾಜರಾಜೇಶ್ವರಿ ದೇವಾಲಯ ಪ್ರವೇಶಿಸಿ, ಅದು ಅಲ್ಲಿನ ನಿಯಮಕ್ಕೆ ವಿರುದ್ಧವಾದ ಕಾರಣ, ದೇವಾಲಯ ಶುದ್ಧೀಕರಣಕ್ಕಾಗಿ 10 ಸಾವಿರ ರೂ. ದಂಡ ತೆತ್ತಿರುವುದು. ಆಕೆ ತೆತ್ತ ದಂಡವನ್ನು ಸ್ವೀಕರಿಸಿದ ನಂತರ, ಅಲ್ಲಿನ ಪೂಜಾರಿಗಳು 10 ದಿನಗಳ ಕಾಲ 'ಶುದ್ಧ ದ್ರವ್ಯಾ ಕಲಶಂ' ಪೂಜಾ ಸೇವೆ ನಡೆಯಬೇಕಾಗಿರುವುದರಿಂದ ಇನ್ನೂ ಹೆಚ್ಚುವರಿಯಾಗಿ 15 ಸಾವಿರ ರೂ. ಬೇಕಾಗುತ್ತದೆ ಎಂದಾಗ, ಆ ನಟಿ ಅದನ್ನೂ ತುಂಬಿಕೊಟ್ಟು 'ನನ್ನ ತಪ್ಪಿನಿಂದ ಭಕ್ತರ ಭಾವನೆಗಳಿಗೆ ದಕ್ಕೆಯಾಗಿದ್ದರೆ ಕ್ಷಮಿಸಬೇಕು' ಎಂದಿದ್ದಾರೆ.

ದೇವಸ್ಥಾನಗಳಿಗೆ ಸ್ತ್ರೀಯರ ಪ್ರವೇಶ ನಿಷೇಧ ವಿರುದ್ಧ ಅಥವಾ ಪ್ರವೇಶಾವಕಾಶ ಪಡೆದ ಹೋರಾಟಗಳ ದಾಖಲೆಗಳೂ ಸಾಕಷ್ಟಿರಬಹುದು. ಆದರೆ ಈ ಲೇಖನದ ಆರಂಭದಲ್ಲಿ ಪ್ರಸ್ತಾಪಿಸಿದ ಇಂದಿನ ಈ 'ಮುಂದುವರಿದ' ಕಾಲಮಾನದಲ್ಲೂ ಸ್ತ್ರೀಯರನ್ನೂ ದೂರವಿಡುವ ಕ್ರೂರಪದ್ಧತಿ ರೂಢಿಯಲ್ಲಿದೆ ಎನ್ನುವುದೆ ಅತ್ಯಂತ ವ್ಯಂಗ್ಯ – ವಿಪರ್ಯಾಸಗಳ ಸಂಗತಿ.

ಪುರೋಹಿತಶಾಹಿಯ ಈ ಪ್ರತ್ಯೇಕತಾ ಮನೋಭಾವನೆಯನ್ನು ಮನಗಂಡೇ ಹನ್ನೆರಡನೆಯ ಶತಮಾನದ ಶಿವಶರಣರು ಈ ಸಂಪ್ರದಾಯದ ವಿರುದ್ಧ ಸಿಡಿದೆದ್ದರು. ವಾಸ್ತವವಾಗಿ ಸ್ತ್ರೀಯರನ್ನು ಪುರುಷರಿಗೆ ಸಮಾನವಾಗಿಯೇ ಕಂಡರು; ಪರಸ್ಪರ ಗೌರವಾದರ ತೋರಿದರು.

ನಮ್ಮ ದೇಶದಲ್ಲಿ (ಇತರ ದೇಶಗಳಲ್ಲೂ ಇರಬಹುದು) ದೇವರ ಬಗೆಗಿರುವ ಪರಿಕಲ್ಪನೆ ಕೇವಲ ಪುರೋಹಿತಶಾಹಿಯ ಸ್ವಾರ್ಥದ ನೆಲಗಟ್ಟಿನ ಮೇಲೆ ನಿರ್ಮಿಸಲಾದುದು. ಉಳಿದೆಲ್ಲ ಜನ ವರ್ಗ ಅನಕ್ಷರಸ್ಥರಾಗಿದ್ದ, ಅಜ್ಞಾನಿಗಳಾಗಿದ್ದ ಕಾಲದಲ್ಲಿ ದೇವಾಲಯ ಕಲ್ಪನೆಯನ್ನು ಹುಟ್ಟುಹಾಕಿ, ಕಲ್ಲು ಮಣ್ಣಿನ ಗುಡಿ ಕಟ್ಟಿಸಿ, ದೇವ–ದೇವತೆಗಳ ವಿಗ್ರಹಗಳನ್ನು ಅಲ್ಲಿ ಕೂರಿಸಿ, 'ಭಕ್ತ ಕ್ಷೇಮ(!) ಮತ್ತು ಲೋಕ ಕಲ್ಯಾಣ(!)' ಕ್ಕಾಗಿ ಪೂಜೆ–ಪೌರೋಹಿತ್ಯ ಜ್ಯೋತಿಷ್ಯ ಶಾಸ್ತ್ರಗಳನ್ನು ನಡೆಸತೊಡಗಿದರು. ಮುಗ್ಧ ಜನಸಮೂಹ ಅದನ್ನೇ ನಂಬಿಕೊಂಡು ಮಾನಸಿಕ ದಾಸ್ಯಕ್ಕೆ ಗುರಿಯಾಯಿತು.

ದೇವರು ನಿರಾಕಾರ, ನಿರ್ಗುಣ, ನಿರ್ವಯಲ, ನಿರ್ಲಿಪ್ತ ಎಂದು ಹೇಳುತ್ತಲೇ ಅವನಿಗೆ ಆಕಾರ ಕೊಟ್ಟರು; ಸಾವಿರ ಗುಣಗಳನ್ನು ಆರೋಪಿಸಿ ಸ್ತುತಿಸಿದರು; ಆಲಯ ಕಟ್ಟಿಸಿದರು. ನಮ್ಮ ಸತ್ಕಾರ್ಯ–ದುಷ್ಕಾರ್ಯಗಳಿಗೆ ಅವನ ಕರುಣೆ–ಕೋಪಗಳೇ ಕಾರಣ ಎಂದರು. ಅವನ ಕಾರುಣ್ಯ ಸಂಪಾದನೆಗೆ, ಕೋಪ ನಿವಾರಣೆಗೆ ಹೋಮ–ಹವನಾದಿ 'ಶಾಂತಿ' ಶಾಸ್ತ್ರಗಳನ್ನು ಸೃಷ್ಟಿಸಿದರು. ದೇವರ ಬಗೆಗೆ ಶ್ರದ್ಧಾ–ಭಕ್ತಿಗಳನ್ನು ಹುಟ್ಟಿಸುವ ಬದಲಾಗಿ ಅಬದ್ಧ ಭಯದ

ಕಲ್ಪನೆಯನ್ನು ಮೂಡಿಸಿದರು. ಪಾಪ-ಪುಣ್ಯ, ಸ್ವರ್ಗ-ನರಕಗಳ ಸಿದ್ಧಾಂತಗಳನ್ನು ರೂಪಿಸಿದರು. ಜನರಲ್ಲಿ ಹೆಜ್ಜೆ ಹೆಜ್ಜೆಗೆ ಪುರೋಹಿತರನ್ನು ಅವಲಂಬಿಸುವಂತಹ ಮೌಢ್ಯವನ್ನು ಬೆಳೆಸಿ, ಅವರ ಕ್ರಿಯಾಶೀಲತೆಗೇ ಬೆಂಕಿ ಹಚ್ಚಿಬಿಟ್ಟರು. ಇದಕ್ಕೆ ಇತಿಹಾಸ ದಲ್ಲಿ ಅಸಂಖ್ಯಾತ ನಿದರ್ಶನಗಳಿವೆ. ಇತಿಹಾಸವೇನು, ಇಂದಿಗೂ ಪುರೋಹಿತಶಾಹಿ ಹಿಂದಿನ ಹುನ್ನಾರಗಲನ್ನು ನಡೆಸುತ್ತಲೇ ಇದೆ ಎಂಬುದಕ್ಕೆ ಮೇಲೆ ಪ್ರಸ್ತಾಪಿಸಿದ ಪ್ರಕರಣ ಗಳೇ ಸಾಕ್ಷಿ.

ಇದನ್ನೆಲ್ಲ ಕಂಡ ಬಸವಣ್ಣನವರು ಒಂದು ಅಪೂರ್ವ ಆಂದೋಲನ ನಡೆಸಿದರು. ಆ ಆಂದೋಲನ ಸಂದೇಶವನ್ನು ಇಂದಿನ ತಲೆಮಾರಿನವರು ಗಂಭೀರವಾಗಿ ಪರಿಗಣಿಸಬೇಕು. ಹನ್ನೆರಡನೆಯ ಶತಮಾನ ದಲ್ಲಿ ಬಸವಣ್ಣನವರು ಸ್ಥಾಪಿಸಿದ ಅನುಭವ ಮಂಟಪ ವಾಸ್ತವವಾಗಿ ಅಂದಿನ ಸಾಂಪ್ರದಾಯಿಕ ವ್ಯವಸ್ಥೆಯ ವಿರುದ್ಧ ನಿರ್ಮಿತವಾದ ವೈಚಾರಿಕ ವೇದಿಕೆ ಯಾಗಿತ್ತು. ಈ ವೇದಿಕೆಯಲ್ಲಿ ಸ್ತ್ರೀ-ಪುರುಷ ಭೇದವಿಲ್ಲದೆ ಎಲ್ಲರೂ ಸಮಾನವಾಗಿ ಕುಳಿತು ಮುಕ್ತವಾಗಿ ತಮ್ಮ ಅನುಭವವನ್ನು ವಿನಿಮಯ ಮಾಡಿಕೊಳ್ಳುತ್ತಿದ್ದರು.

ಈ ಸಂದರ್ಭದಲ್ಲಿ ಶರಣರು ಸ್ತ್ರೀಯರ ಬಗೆಗೆ ಇಟ್ಟು ಕೊಂಡಿದ್ದ ದೃಷ್ಟಿ ಎಂತಹುದು ಎನ್ನುವುದಕ್ಕೆ ಅವರ ಕೆಲವಾದರೂ ವಚನಗಳನ್ನು ಇಲ್ಲಿ ಉದಾಹರಿಸುವುದು ಅಗತ್ಯವೆಂದು ನಾನು ಭಾವಿಸಿದ್ದೇನೆ :

*ಹೆಣ್ಣು ಹೆಣ್ಣಾದಡೆ ಗಂಡಿನ ಸೂತಕ, ಗಂಡು*
*ಗಂಡಾದರೆ ಹೆಣ್ಣಿನ ಸೂತಕ, ಮನದ ಸೂತಕ*
*ಹಿಂಗಿದಡೆ, ತನುವಿನ ಸೂತಕಕ್ಕೆ ತೆರವುಂಟೆ?*
*ಅಯ್ಯಾ, ಮಾಡಲಿಲ್ಲದ ಸೂತಕಕ್ಕೆ ಮರುಳಾಯಿತ್ತು*
*ಜಗವೆಲ್ಲ ಎನ್ನದೇವ ಚನ್ನಮಲ್ಲಿಕಾರ್ಜುನನೆಂಬ*
*ಗುರುವಂಗೆ ಜಗವೆಲ್ಲ ಹೆಣ್ಣು ನೋಡಾ !*

– ಅಕ್ಕಮಹಾದೇವಿ

*ಬರುವ ಮುಂದೆ ಪುರುಷನಿದ್ದೆ, ಬಂದ ಬಳಿಕ*
*ಸ್ತ್ರೀಯಾದೆ ಇನ್ನು ಮುಂದೆ ನಪುಂಸಕನಾದೆ,*
*ನಮ್ಮ ಕಪಿಲ ಸಿದ್ಧ ಮಲ್ಲಿಕಾರ್ಜುನನ ಕೂಡಬೇಕೆಂದಲ್ಲಿ*
*ಪುರುಷನಾದೆ ನೋಡವ್ವಾ, ಎನ್ನ ಹೆತ್ತ ತಾಯೆ !*

– ಸಿದ್ಧರಾಮ

*ಮೊಲೆ ಮುಡಿ ಬಂದಡೆ ಹೆಣ್ಣೆಂಬರು, ಮೀಸೆ ಕಾಸೆ*
*ಬಂದಡೆ ಗಂಡೆಂಬರು ಈ ಉಭಯದ ಜ್ಞಾನ ಗಂಡೋ*
*ಹೆಣ್ಣೋ ನಾಸ್ತಿನಾಥ !*

– ಗೊಗ್ಗವ್ವೆ

*ಹೊನ್ನು ಮಾಯೆ ಎಂಬರು, ಹೊನ್ನು ಮಾಯೆಯಲ್ಲ,*
*ಹೆಣ್ಣು ಮಾಯೆ ಎಂಬರು, ಹೆಣ್ಣು ಮಾಯೆಯಲ್ಲ,*
*ಮಣ್ಣೂ ಮಾಯೆ ಎಂಬರು, ಮಣ್ಣು ಮಾಯೆಯಲ್ಲ,*
*ಮನದ ಮುಂಡಣ ಆಸೆಯೆ ಮಾಯೆ ಕಾಣಾ*
*ಗುಹೇಶ್ವರಾ !*

– ಅಲ್ಲಮಪ್ರಭು

*ತಾ ಮಾಡಿದ ಹೆಣ್ಣು ತನ್ನ ತಲೆಯನೇರಿತ್ತು*
*ತಾ ಮಾಡಿದ ಹೆಣ್ಣು ತನ್ನ ತೊಡೆಯನೇರಿತ್ತು*
*ತಾ ಮಾಡಿದ ಹೆಣ್ಣು ತನ್ನ ನಾಲಿಗೆಯನೇರಿತ್ತು*
*ತಾ ಮಾಡಿದ ಹೆಣ್ಣು ನಾರಾಯಣನ ಎದೆಯನೇರಿತ್ತು*
*ಅದು ಕಾರಣ ಹೆಣ್ಣು ಹೆಣ್ಣಲ್ಲ, ಹೆಣ್ಣು ರಾಕ್ಷಸಿಯಲ್ಲ*
*ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧ ಮಲ್ಲಿಕಾರ್ಜುನ ನೋಡಾ!*

– ಸಿದ್ಧರಾಮ

ಹೀಗೆ ನೂರಾರು ವಚನಗಳನ್ನು ಉಲ್ಲೇಖಿಸುತ್ತ ಹೋಗ ಬಹುದು. ಈ ವಚನಗಳನ್ನೆಲ್ಲ ವಿವರಿಸುವ ಅಗತ್ಯವಿಲ್ಲ. ಅವು ನಮ್ಮ ಅಂತರಂಗಕ್ಕಿಳಿದು ನೇರವಾಗಿ ಮಾತನಾಡು ತ್ತವೆ. ಬಸವಣ್ಣನವರಂತೂ ದೇವರ ಹೆಸರಿನಲ್ಲಿ ಪಾರುಪತ್ಯೆ ನಡೆಸುವ ಪುರೋಹಿತರ ಬಗೆಗೆ ಕಿಡಿ ಕಾರಿದ್ದಾರೆ. "ಪ್ರಾಣಾಯ ಸ್ವಾಹಾ, ಅಪನಾಯ ಸ್ವಾಹಾ, ವ್ಯಾನಾಯಾ ಸ್ವಾಹಾ, ಉದಾನಾಯ ಸ್ವಾಹಾ, ಸಮಾನಾಯಾ ಸ್ವಾಹಾ' ಎಂಬ ಕರ್ಮಿಗಳ ನೇನೆಂಬೆ ಕೂಡಲಸಂಗಮದೇವ!" ಎಂದಿದ್ದಾರೆ. 'ಹೆಣ್ಣ ಬಿಟ್ಟು ದೇವರನ್ನು ಒಲಿಸಬೇಕು ಎನ್ನುತ್ತಾರೆ. ಹೆಣ್ಣಿಗೂ ದೇವರಿಗೂ ದ್ವೇಷವಿದೆಯೇ?' ಎಂದು ಶರಣ ಗಜೇಶ ಮಸಣಯ್ಯನ ಪತ್ನಿ ಕೇಳುತ್ತಾಳೆ.

ಶರಣ ಸಂಸ್ಕೃತಿಯ ನೆರಳಲ್ಲೇ ಬೆಳೆದ ನಮ್ಮ ಹಳ್ಳಿಯ ಹೆಣ್ಣು ತನ್ನ ಬೀಸುವ ಹಾಡಿನ ಒಂದು ತ್ರಿಪದಿಯಲ್ಲಿ ಈ ಪುರೋಹಿತಶಾಹಿಯ ಮಧ್ಯಸ್ಥಿಕೆಯನ್ನು ಎಷ್ಟು ನೇರವಾಗಿ ವಿರೋಧಿಸುತ್ತಾಳೆ ನೋಡಿ :

*ದೇವರಿಗೆ ಹೋಗಬೇಕು, ದಾರಿ ಬಿಡೊ ಪೂಜಾರಿ*
*ದೇವರಿಗು ನನಗು ಒಳ ಮಾತು-ಭೈರುವನ*
*ಠಾವಿಗ್ಹೋಗಿ ಕೈಯ ಮುಗಿದೇನು !*

(ಈ ಠಾವೇ ನಾವಿಂದು ಹೇಳುತ್ತಿರುವ ಗರ್ಭಗುಡಿ ಅಥವಾ ಗರ್ಭಾಂಕಣ)

ಬಹುಶಃ ಇಂದಿನ ಜಯಮಾಲಾ, ಗಿರಿಜಾ ಲೋಕೇಶ್, ಸುಧಾ ಚಂದ್ರನ್ ಅವರಂತಹ ಮಹಿಳೆಯರು ನಮ್ಮ ಜನಪದ ಹೆಣ್ಣಿನ ಕೆಚ್ಚು ತೋರಿಸಬೇಕು. ಮಾನಸಿಕ ಅಂಜಿಕೆಯನ್ನು ತೊಲಗಿಸಬೇಕು. ಅವರೇನೂ ತಪ್ಪು ಮಾಡಿಲ್ಲ. ಯಾವುದೇ ಅಪರಾಧ ಪ್ರಜ್ಞೆ ಅವರನ್ನು ಕಾಡಬೇಕಾಗಿಲ್ಲ. ಅವರು ಯಾರ ಕ್ಷಮೆಯನ್ನು ಕೇಳುವ ಅಗತ್ಯವೂ ಇಲ್ಲ. ಮಾನವರಿರಲಿ, ಆ ದೇವರ ಕ್ಷಮೆಗಾಗಿಯೂ ಅವರು ಯೋಚಿಸಬೇಕಾಗಿಲ್ಲ.

ಆದರೆ ಪತ್ರಿಕೆಗಳಲ್ಲಿ ಬಂದಿರುವ ಈ ಮಹಿಳೆಯರ ಪ್ರತಿಕ್ರಿಯೆಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಅವರಲ್ಲೂ





ಅಯ್ಯಪ್ಪನ ಬಗೆಗೆ ಅಂಜಿಕೆ ಮನೆ ಮಾಡಿಕೊಂಡಿರುವುದು ವ್ಯಕ್ತವಾಗುತ್ತದೆ. ಇದನ್ನು ಅವರು ಕಳೆದುಕೊಳ್ಳಬೇಕು. ಅವರಷ್ಟೇ ಅಲ್ಲ, ಇಂತಹ ಮಾನಸಿಕ ದೌರ್ಬಲ್ಯವನ್ನು ಕಳಚಿಕೊಂಡು ಇಡೀ ಮಹಿಳಾ ಸಮುದಾಯವೇ ಭಾವನಾ ತ್ಮಕ ಬಂಧನದಿಂದ ಹೊರಬರಬೇಕು.

ಎಲ್ಲರ ಪಾಪಗಳನ್ನು ಪರಿಹರಿಸುತ್ತಾನೆನ್ನುವ ಪರಮಾತ್ಮನೇ ಅಪವಿತ್ರನಾಗುವುದು ಹೇಗೆ? ಅಲ್ಲಿನ ತಂತ್ರಿ ಗಳಿಗೆ ವೈಚಾರಿಕ ಪ್ರಜ್ಞೆ ಇದೆ ಎಂದು ಹೇಳಲು ಸಾಧ್ಯವೇ? ಜಯಮಾಲಾ ತಪ್ಪು ಸಾಬೀತಾದರೆ ತೀವ್ರ ಶಿಕ್ಷೆ ಅನಿವಾರ್ಯ ಎಂದು ಹೇಳುವ ಆ ದೇವಸ್ವಂ ಮಂಡಳಿಯು ಧರ್ಮ ಧನುರ್ವಾತ ಪೀಡಿತ ಎಂದು ಹೇಳಬಾರದೆ? ಜಯಮಾಲಾ ಅಪಚಾರ ಮಾಡಿದ್ದಾರೆಂದು ಅವರ ಪ್ರತಿಕೃತಿ ದಹನ ಮಾಡಿ ಕುಣಿಯುವ ಅಯ್ಯಪ್ಪಸ್ವಾಮಿಯ ಅಲ್ಲಿನ 'ಅನುಯಾಯಿ' ಗಳಿಗೆ ತಾವೂ ಹೆಣ್ಣಿನ ಹೊಟ್ಟೆಯಲ್ಲಿ ಹುಟ್ಟಿದವರು ಎಂಬುದು ಮರೆತುಹೋಗಿದೆಯೇ?

ಒಂದು ವೇಳೆ, ಈ ಹಿಂದೆ ಅಲ್ಲಿನ ಹೈಕೋರ್ಟು ಮಹಿಳೆಯರ ಪ್ರವೇಶ ನಿಷೇಧವು ಧಾರ್ಮಿಕ ನಂಬಿಕೆಗೆ ಸಂಬಂಧಿಸಿದ ಕಾರಣ ಹೇಳಿ, ಅದರ ಪರವಾಗಿ ತೀರ್ಪು ನೀಡಿದ್ದರೆ, ಸಂವಿಧಾನದಲ್ಲಿ ಪ್ರಣೀತವಾಗಿರುವ ಸ್ತ್ರೀ-ಪುರುಷ ಸಮಾನತೆಯನ್ನು ಆಧಾರವಾಗಿಟ್ಟುಕೊಂಡು ಸಂಸತ್ತಿನಲ್ಲಿ ಸಂಬಂಧಪಟ್ಟ ಶಾಸನಕ್ಕೆ ತಿದ್ದುಪಡಿ ತರುವ ಕೆಲಸವನ್ನು ನಮ್ಮ ಸಂಸದರು ಮಾಡಬೇಕು. ನಾವು ನಿಜವಾಗಿಯೂ ನಮ್ಮ ಸಂವಿಧಾನಕ್ಕೆ ಬದ್ಧವಾಗಿದ್ದರೆ ಮಾನವ ಸಮಾನತೆಯ ಘನತೆಗೆ ಕಳಂಕವೆನಿಸಿರುವ ಇಂತಹ ಅನಿಷ್ಟಗಳನ್ನು ಶಾಸನ ಬದ್ಧವಾಗಿಯೇ ನಿವಾರಿಸಬೇಕು. ಇದಕ್ಕೆ ಪುರೋಹಿತ ವರ್ಗ ಮತ್ತು ಪೂಜಾರಿ ಮನೋಭಾವದ ಕೆಲವರು ವಿರೋಧ ವ್ಯಕ್ತಪಡಿಸಬಹುದು. ಆದರೆ ಪ್ರಜಾ ಸತ್ತಾತ್ಮಕವಾಗಿ ಇಡೀ ಜನ ಸಮುದಾಯ ಅಂತಹ ಶಾಸನಕ್ಕೆ ಬೆಂಬಲ ನೀಡುವಲ್ಲಿ ಸಂಶಯವಿಲ್ಲ.

ದೇವರು ಮತ್ತು ಧರ್ಮದ ಹೆಸರಿನಲ್ಲಿ ಶಬರಿಮಲೈ ಪ್ರಸಂಗದಂತಹ ಅವಿವೇಕದ ಅನೇಕ ಆಚರಣೆಗಳು ರೂಡಿ ಯಲ್ಲಿರುವ ಕಾರಣದಿಂದಲೇ ಡಾ|| ಬಾಬಾ ಸಾಹೇಬ್ ಅಂಬೇಡ್ಕರ್ ಅವರು 'ಹಿಂದೂ ಧರ್ಮ ಮಾನವ ಜನಾಂಗದ ಒಂದು ಶಾಪ' ಎಂದು ನೊಂದು ನುಡಿದದ್ದು.

ಒಂದು ದೃಷ್ಟಿಯಿಂದ, ಜಯಮಾಲಾ ಪ್ರಸಂಗ ನಮ್ಮ ದೇಶದಲ್ಲಿ ಇನ್ನೂ ದಳ್ಳುರಿ ಎಬ್ಬಿಸುತ್ತಿರುವ ಸ್ತ್ರೀ-ಪುರುಷ ಪ್ರತ್ಯೇಕತೆಯನ್ನು ಉಳಿಸಿಕೊಂಡು ಬರಲು ಯತ್ನಿಸುತ್ತಿರುವ ಸ್ವಹಿತಾಸಕ್ತಿಗಳ ವಿರುದ್ಧ ಮಹಿಳೆಯರು ಮತ್ತಷ್ಟು ಸಂಘಟಿತ ರಾಗಿ ಹೋರಾಟ ಮಾಡಲು ಪ್ರೇರಣೆಯಾಗಬೇಕು. ದೇಶದ ಯಾವುದೇ ಧಾರ್ಮಿಕ ಮತ್ತು ಇತರ ಸ್ಥಳಗಳಿಗೆ ಪುರುಷ ರಂತೆ ಸ್ತ್ರೀಯರಿಗೂ ಯಾವ ಜಾತಿ ಅಥವಾ ವಯೋಬೇಧವೂ ಇಲ್ಲದೆ ಪ್ರವೇಶ ಮುಕ್ತವಾಗುವಂತೆ ಹೋರಾಟ ನಡೆಸಬೇಕು.

ಸುಮಾರು ಹತ್ತು ವರ್ಷಗಳ ಹಿಂದೆ ಬಳ್ಳಾರಿ ಜಿಲ್ಲೆಯ ಸಂಡೂರಿನ ಕುಮಾರಸ್ವಾಮಿ ದೇವಾಲಯದಲ್ಲಿ ಇದ್ದ ಇಂತಹುದೇ ಸ್ತ್ರೀ-ಪ್ರವೇಶ ನಿರ್ಭಂಧದ ಅಡ್ಡಗೋಡೆಯ ನ್ನೊಡೆದು ಆ ಸಂಪ್ರದಾಯವನ್ನೇ ಮುರಿದು ಎಲ್ಲ ಮಹಿಳೆ ಯರಿಗೂ ಅಲ್ಲಿ ಮುಕ್ತ ಪ್ರವೇಶಕ್ಕೆ ಅವಕಾಶವಾಗುವಂತೆ ಮಾಡಿದ ಬಂಡಾಯ ಪಂಥದ ಡಾ|| ಮಲ್ಲಿಕಾ ಘಂಟಿ ಮತ್ತವರ ಗೆಳತಿಯರ ಸಾಹಸವನ್ನು ಇಲ್ಲಿ ನೆನೆಯಬೇಕು.

'ಅಪವಿತ್ರ' ಗೊಂಡಿರುವ ಅಯ್ಯಪ್ಪನ ಮೂರ್ತಿ ಮತ್ತು ದೇವಾಲಯಗಳನ್ನು 'ಶುದ್ಧಿಕರಣ' ಮಾಡ ಹೊರಟಿರುವ ಕೇರಳದ ತಂತ್ರಿಗಳು, ಕನ್ನಡದ ತತ್ವಪದಕಾರ ಚನ್ನೂರ ಜಲಾಲ ಸಾಬ್ ಹೇಳುವ 'ಮಾಡಬ್ಯಾಡರಿ ಮ್ಯಾಲಿನ ಶೀಲಾ, ತೊಳೆಯಬೇಕರಿ ಒಳಗಿನ ಮೈಲಾ' ಎಂಬ ಮಾತನ್ನು ಅರ್ಥಮಾಡಿಕೊಳ್ಳಬೇಕು.

ಜಯಮಲಾ ಅವರಿಗೆ ಜ್ಯೋತಿಷ್ಯರು 'ಪಶ್ಚಾತ್ತಾಪಕ್ಕೆ ಇದು ಸಕಾಲ' ಎಂದಿರುವಂತೆ, ನಮ್ಮ ದೇಶದ ಈ ಧಾರ್ಮಿಕ ಔದ್ಧತ್ಯವನ್ನು ಕೊನೆಗಾಣಿಸಲೂ ಇದು 'ಸಕಾಲ'ವಾಗಬೇಕು. ಇದಕ್ಕೆ ಹನ್ನೆರಡನೆಯ ಶತಮಾನದ ಆಂದೋಲನದ ಮಾರ್ಗ ದರ್ಶನ ನಮಗಿದೆ. *

## 'ಅಭಿನಂದನೆ'



ಶ್ರೀ ಸಿದ್ಧಗಂಗಾ ಮಠದ ಸನಿವಾಸ ಪ್ರೌಢಶಾಲೆಯಲ್ಲಿ ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಿರುವ ಶ್ರೀ ಕೆ.ಬಿ. ಶಿವಶಂಕರಯ್ಯ ನವರಿಗೆ ಬೆಂಗಳೂರಿನ ಕರ್ನಾಟಕ ಪ್ರತಿಭಾ ಅಕಾಡೆಮಿ ಸಂಸ್ಥೆಯವರು 'ಡಾ|| ಎಸ್. ರಾಧಾಕೃಷ್ಣನ್ ಪ್ರಶಸ್ತಿ' ಯನ್ನು ನೀಡುವುದರ ಮೂಲಕ ಉತ್ತಮ ಶಿಕ್ಷಕರೆಂದು ಗೌರವಿಸಿರುವುದನ್ನು ತಿಳಿದು 'ಸಿದ್ಧಗಂಗಾ' ಅಭಿನಂದನೆ ಯನ್ನು ಸಲ್ಲಿಸಲು ಸಂತೋಷಿಸುತ್ತದೆ.

# ಪುಸ್ತಕ ಪ್ರೇಮ

– **ಹುಲಿಕಲ್ ನಾಗರಾಜ,** ನಂ. ೧೦೪, ಹಳೇತಿಪ್ಪಸಂದ್ರ, ಹೆಚ್.ಎ.ಎಲ್, ೩ನೇ ಹಂತ, ಬೆಂಗಳೂರು –೫೬೦ ೦೦೮.

ನಮ್ಮ ಪೂರ್ವಜರ ಪುರಾಣ, ಇತಿಹಾಸ ತಿಳಿಯಲು ಪುಸ್ತಕಗಳು ಸಹಕಾರಿ. ಯಾರು ಪೂರ್ವದ ಪುರಾಣ, ಇತಿಹಾಸವನ್ನು ತಿಳಿಯಲು ಇಚ್ಚೆಪಡುವುದಿಲ್ಲವೋ ಅಂತಹವರಿಂದ ಭವಿಷ್ಯ ನಿರ್ಮಾಣ ಸಾಧ್ಯವಿಲ್ಲ. ನಮ್ಮ ಶಾಸನಗಳು, ಪುಸ್ತಕಗಳು ನಮ್ಮ ದೇಶದ ಗತವೈಭವವನ್ನು ಅಂದಿನ ಆಗು ಹೋಗುಗಳನ್ನು ತಿಳಿದುಕೊಳ್ಳಲು ನಮ್ಮನ್ನು ಕೈಬೀಸಿ ಸ್ವಾಗತಿಸುತ್ತವೆ. ಇವುಗಳ ಪ್ರಯೋಜನ ಪಡೆಯುವುದು ಪ್ರತಿಯೊಬ್ಬರ ಕರ್ತವ್ಯ.

ಮಾನವ ಹಲವಾರು ಹವ್ಯಾಸಗಳನ್ನು ಮೈಗೂಡಿಸಿಕೊಂಡಿರುತ್ತಾನೆ. ಯಾವುದೇ ಹವ್ಯಾಸಗಳಿದ್ದರೂ ಸಹ ಪುಸ್ತಕ ಸಂಸ್ಕೃತಿಯು ನೀಡುವಷ್ಟು ಮುದವನ್ನು ಬೇರಾವ ಮಾಧ್ಯಮವೂ ನೀಡಲಾರದು. ಈ ಸಂಸ್ಕೃತಿಯನ್ನು ಬೆಳೆಸಿಕೊಂಡು ಸೃಜನಶೀಲನಾಗದಿರುವುದು ಒಂದು ದುರಂತವೆನಿಸುತ್ತದೆ. ಪುಸ್ತಕಗಳು ಕೇವಲ ಸಂಗ್ರಹ ವಸ್ತುಗಳಲ್ಲ. ಆ ಪುಸ್ತಕಗಳಲ್ಲಿರುವ ಅಂಶಗಳನ್ನು ಓದಿ ಅರಿತು ಅನುಷ್ಠಾನಕ್ಕೆ ತಂದುಕೊಳ್ಳುವ ಓದುಗರ ಸಂಖ್ಯೆ ಹೆಚ್ಚಾಗಬೇಕು. ಡಿ.ವಿ.ಜಿ. ಯವರು ಹೇಳುವಂತೆ

ಪುಸ್ತಕದಿ ದೊರತರಿವು ಮಸ್ತಕದಿ ತಳೆದ ಮಣಿ
ಚಿತ್ತದೊಳು ಬೆಳೆದರಿವು ತರುತಳೆದ ಪುಷ್ಪ
ವಸ್ತು ಸಾಕ್ಷಾತ್ಕಾರವಂತರೀಕ್ಷಣೆಯಿಂದ
ಶಾಸ್ತ್ರಿತನದಿಂದಲ್ಲ – ಮಂಕುತಿಮ್ಮ.

ಪುಸ್ತಕಗಳನ್ನು ಓದುವುದು ಒಂದು ಹುಚ್ಚು. ಯಾವುದಾದರೊಂದು ಪುಸ್ತಕವನ್ನು ಓದದಿದ್ದರೆ ಅಂದು ನಿದ್ರೆ ಹತ್ತುವುದಿಲ್ಲ ಎಂದು ಹೇಳುವವರೂ ಇದ್ದಾರೆ. ಇದೊಂದು ತೆರನಾದ ಜ್ಞಾನದಾಹದ ವ್ಯಸನ. ಕತ್ತಲೆಯಿಂದ ಬೆಳಕಿಗೆ ಕರೆದುಕೊಂಡು ಹೋಗುವ ಗುರುಗಳಂತೆ ಪುಸ್ತಕದ ಓದುಕೆಯೂ ಕೂಡ ತನ್ನ ಸ್ವಾನುಭವವನ್ನು ಹೆಚ್ಚಿಸುವುದರೊಂದಿಗೆ, ಓದಿನ ತನ್ಮಯತೆಯಲ್ಲಿ ಜಗತ್ತಿನ ಜಂಜಡವನ್ನು ಮರೆಸಿ ಮನಸ್ಸಿಗೆ ಮುದ ನೀಡುತ್ತದೆ. ಭೋಗ ವಸ್ತುಗಳನ್ನು ಸಂಗ್ರಹಿಸುವ ಉತ್ಕಟೇಚ್ಛೆಯಂತೆ ಜ್ಞಾನ ಸಂಗ್ರಹ ಮಾಡಿಕೊಳ್ಳುವುದೂ ಒಂದು ಅಮೂಲ್ಯ ಹವ್ಯಾಸವೇ ಅಲ್ಲವೇ? ಜ್ಞಾನದಾಹಿಗಳು ತಮ್ಮ ಅಮೂಲ್ಯ ವೇಳೆಯನ್ನು ಹೇಗೆ ಕಳೆಯುತ್ತಾರೆಂಬುದನ್ನು ಒಂದು ಸುಭಾಷಿತ ನುಡಿ ಹೀಗೆ ಉಲಿಯುತ್ತದೆ.

ಕಾವ್ಯಶಾಸ್ತ್ರ ವಿನೋದೇನ ಕಾಲೋಗಚ್ಛತಿ ಧೀಮತಾಮ
ವ್ಯಸನೇತು ಮೂರ್ಖಾಣಾಂ ನಿದ್ರಾಯಾ ಕಲಹೇನವಾ

ಕಾವ್ಯಶಾಸ್ತ್ರಗಳನ್ನು ಓದಿ ಸಂತೋಷಪಡುವುದರಲ್ಲಿ ಬುದ್ಧಿವಂತರ ವೇಳೆ ಕಳೆಯುತ್ತದೆ. ಆದರೆ ಮೂರ್ಖರ ವೇಳೆ ಜೂಜು, ನಿದ್ರೆ ಜಗಳದಲ್ಲಿ ಹೋಗುತ್ತದೆ.

ಅನುಭಾವಿಗಳಾದ ಕನಕದಾಸರು, ಜಗನ್ನಾಥದಾಸರು, ಶರಣರಾದ ಬಸವೇಶ್ವರರು, ಅಲ್ಲಮಪ್ರಭುಗಳು, ದೇವರ ದಾಸಿಮಯ್ಯ, ಅಕ್ಕಮಹಾದೇವಿ ಅಲ್ಲದೇ ಮಹಾಕವಿಗಳಾದ ಕುಮಾರವ್ಯಾಸ, ಲಕ್ಷ್ಮೀಶ ಹರಿಹರ, ರಾಘವಾಂಕ ಇವರು ಬರೆದು ಸಮಾಜಕ್ಕೆ ಅರ್ಪಿಸಿದ ಹೊತ್ತಿಗೆಗಳು ಇಂದೂ ಸಹ ಜನಮನದ ಹೃದ್ರಂಗದಲ್ಲಿ ರಾರಾಜಿಸುತ್ತಾ ಕೆಲವರಿಗೆ ಕಂಠಸ್ಥವು ಆಗಿವೆ. ಕವಿ ಕುಮಾರವ್ಯಾಸರ ಮಹಾಭಾರತದ ಒಂದು ಷಟ್ಪದಿಯು

*ಅರಸುಗಳಿಗಿದು ವೀರ ದ್ವಿಜರಿಗೆ*
*ಪರಮವೇದದ ಸಾರ ಯೋಗೀಶ್ವರರ ತತ್ವವಿಚಾರ*
*ಮಂತ್ರಿಜನಕೆ ಬುದ್ಧಿಗುಣ*
*ವಿರಹಿಗಳ ಶೃಂಗಾರ ವಿದ್ಯಾಪರಿಣತರಲಂಕಾರ ಕಾವ್ಯಕೆ*
*ಗುರುವೆನಲು ರಚಿಸಿದವನು ಕುಮಾರವ್ಯಾಸ ಭಾರತವ*

ಎಂದು ಘೋಷಿಸಿದ ಕುಮಾರವ್ಯಾಸ ಕವಿಯ ಷಟ್ಪದಿಯೊಂದರಲ್ಲೇ ಇಂತಹ ಗಹನವಾದ ವಿಚಾರ ಅಡಕವಾಗಿದೆ ಎಂದ ಮೇಲೆ ನಾವು ಒಂದು ಬೃಹತ್ ಗ್ರಂಥಾಲಯವನ್ನು ಹೊಕ್ಕು ಅಲ್ಲಿನ ಎಲ್ಲಾ ಪ್ರಕಾರ ಪುಸ್ತಕಗಳನ್ನು ಓದುವ ಪ್ರಯತ್ನ ನಡೆಸಿದರೆ ಎಂತಹ ಉದ್ದಾಮ ವಿಚಾರವಂತರಾಗಬಹುದು ನೀವೇ ಊಹಿಸಿ.

ಮಹಾತ್ಮ ಗಾಂಧೀಜಿ, ಜವಾಹರ್‌ಲಾಲ್ ನೆಹರು, ವಿನೋಭಾ ಭಾವೆ, ಡಾ॥ ರಾಧಾಕೃಷ್ಣನ್‌ರವರು ಸ್ವತಃ ಲೇಖಕರು ಹಾಗೂ ನಿತ್ಯ ಓದುಗರು. ಅವರು ಬರೆದ ಹಲವಾರು ಪುಸ್ತಕಗಳು ನಮಗೆ ಇಂದು ದಾರಿದೀಪವಾಗಿದೆ. ಪುಸ್ತಕ ಪ್ರೇಮಿಗಳು ಊಟ ಮಾಡುತ್ತಿರಲಿ, ನಿದ್ರಿಸುತ್ತಿರಲಿ, ಪ್ರಯಾಣ ಮಾಡುತ್ತಿರಲಿ, ಪುಸ್ತಕದ ಹೊರೆ ಅವರ ಜೊತೆಯಲ್ಲಿಯೇ ಇರುತ್ತದೆ. ಜ್ಞಾನವೃದ್ಧಿಗಾಗಿ ಕಥೆ, ಕಾದಂಬರಿ, ನಾಟಕ, ವಿಚಾರ, ಸಾಹಿತ್ಯ, ಕಾವ್ಯಗಳನ್ನು ಓದಿ ಪುಸ್ತಕದಿಂದ ಹುರುಪು ಮೂಡಿಸಿ, ನಾವು ಮಹತ್ತರ ಕೆಲಸಗಳನ್ನು ಮಾಡುವಂತೆ ಪ್ರೇರೇಪಿಸುತ್ತದೆ. ಕೆಲವು ಪುಸ್ತಕಗಳನ್ನು ಒಮ್ಮೆ ತಿರುವಿ ಹಾಕಬೇಕು. ಕೆಲವನ್ನು ರುಚಿ ನೋಡಬೇಕು. ಕೆಲವನ್ನು ನುಂಗಬೇಕು. ಮತ್ತೆ ಕೆಲವನ್ನು ಪದೇ ಪದೇ ಚಪ್ಪರಿಸಬೇಕು. ಉತ್ತಮ ಧ್ಯೇಯಗಳನ್ನು ಹೊಂದಿರುವ ಪುಸ್ತಕಗಳು, ನಮ್ಮ ಜೀವನದಲ್ಲಿ ಹೊಸ





ಮಾರ್ಪಾಟನ್ನು ತರುತ್ತವೆ.

ಒಬ್ಬ ವ್ಯಕ್ತಿಯ ವ್ಯಕ್ತಿತ್ವ ಎಂತಹುದೆಂಬುದನ್ನು ತಿಳಿಯಲು ಆತನ ಅಭಿರುಚಿಯು ಯಾವ ಪ್ರಕಾರದ ಪುಸ್ತಕಗಳ ಮೇಲಿದೆ ಎಂಬುದರಿಂದ ತಿಳಿಯಬಹುದು. ಇದರೊಂದಿಗೆ ದಿನಪತ್ರಿಕೆ, ವಾರಪತ್ರಿಕೆ, ಮಾಸಪತ್ರಿಕೆಯನ್ನು ತಿರುವು ಹಾಕುವುದರಿಂದ ಹೆಚ್ಚಿನ ವಿಷಯ ಸಂಗ್ರಹಣೆಯಾಗುತ್ತದೆ. ನಗರ ಹಾಗೂ ಗ್ರಾಮಾಂತರ ಪ್ರದೇಶದಲ್ಲಿ ಕೆಲವು ಪುಸ್ತಕ ಪ್ರೇಮಿಗಳು ಸ್ವಇಚ್ಛೆಯಿಂದ ಗ್ರಂಥಾಲಯಗಳನ್ನು ತೆರೆದು ಜ್ಞಾನವೃದ್ಧಿಗೆ ಸಹಕರಿಸುತ್ತಿದ್ದಾರೆ. ಅದರ ಪ್ರಯೋಜನ ಪಡೆಯುವುದು ವಿದ್ಯಾವಂತರೆನಿಸಿದವರೆಲ್ಲರ ಕರ್ತವ್ಯ. ಅಲ್ಲದೇ ತಾವೇ ಓದಿದ ವಿಚಾರವನ್ನು ಮಕ್ಕಳಿಗೆ, ಅನಕ್ಷರಸ್ಥರಿಗೆ ತಿಳಿಸಿ ಕಲಿತ ಋಣವನ್ನು ಕಲಿಸಿ ತೀರಿಸುವ ಮನೋಭಾವವನ್ನು ಮೈಗೂಡಿಸಿಕೊಳ್ಳುವುದು ಅವಶ್ಯ.

ಪುಸ್ತಕಗಳನ್ನು ಮನೆಯಲ್ಲಿ ಒಪ್ಪ–ಓರಣವಾಗಿ ಸಂಗ್ರಹಿಸಿಡುವವರು ಕೆಲವರು. ಈತನೊಬ್ಬ ದೊಡ್ಡ ಓದುಗ. ಜ್ಞಾನಿ ಎಂದು ತಿಳಿದುಕೊಳ್ಳಲೆಂದು ಸಂಗ್ರಹಿಸುವವರು ಮತ್ತೊಬ್ಬರು. ಜ್ಞಾನದಾಹವನ್ನು ನೀಗಿಸಿಕೊಳ್ಳಲು ಸಂಗ್ರಹಿಸಿ ಡುವವರು. ಮಾತ್ರ ನಿಜವಾದ ಓದುಗರು. ಇಂತಹವರಿಗೆ ಪುಸ್ತಕವೇ ಸರ್ವಸ್ವ. ಒಂದು ಉತ್ತಮ ಪುಸ್ತಕ ಜಗತ್ತಿನ ಅನುಭವ. ವಿಚಾರ ವಿದ್ಯಮಾನಗಳನ್ನು ಓದುಗರ ಮುಂದೆ ಬಿಚ್ಚಿಡುತ್ತದೆ. ಬದುಕಿನ ಒಳಿತು, ಕೆಡಕು, ವಿವೇಚನೆ, ವಿಶ್ವಾಸ, ನಂಬಿಕೆ ಇವನ್ನು ಗುರುತಿಸಲು ಒಂದು ಉತ್ತಮ ಪುಸ್ತಕ ಓದುವಿಕೆಯಿಂದ ಸಾಧ್ಯ. ವಿವೇಕಾನಂದರ ಮಾತಿನಂತೆ ಪುಸ್ತಕ ಖಜಾನೆಯಿದ್ದಂತೆ, ಈ ಖಜಾನೆಯಲ್ಲಿ ಬೆಳ್ಳಿ, ಬಂಗಾರ, ಚಿನ್ನ, ವಜ್ರ, ಹಣ ಇಲ್ಲ. ಕದಿಯಲಾರದಂತಹ ಜ್ಞಾನ. ಆದರ್ಶ, ಶ್ರೇಷ್ಠ ಆಲೋಚನೆಗೆ ಪೂರಕವಾದ ಅಂಶಗಳು ಮಾತ್ರ ಈ ಖಜಾನೆಯಲ್ಲಿವೆ. ಆದ್ದರಿಂದ ಪುಸ್ತಕಗಳು ಗುಪ್ತಧನ, ಆದರ್ಶ ಮಾರ್ಗದರ್ಶಕ.

ಗ್ರಂಥಾಲಯಗಳಿಗೆ ಹೋಗಿ ಪುಸ್ತಕಗಳನ್ನು ಓದುವ ಪರಿಪಾಠದೊಂದಿಗೆ ಓದಿದ ಉಪಯುಕ್ತ ವಿಚಾರಗಳನ್ನು ಗುರುತು ಹಾಕಿ ಬರೆದು ಸಂಗ್ರಹಿಸಿಟ್ಟುಕೊಳ್ಳುವುದು ಉತ್ತಮ. ಹೊಸ ಪುಸ್ತಕವನ್ನು ಓದಿದಾಗ ಇಲ್ಲವೇ ಕೊಂಡುತಂದಾಗ ತಮ್ಮ ಮನೆಗೊಬ್ಬ ಹೊಸನೆಂಟ ಬಂದನೆಂದು ಸಂತೋಷಿಸುವವರು ನಿಜವಾದ ಓದುಗರು. ಪಾಟೀಲ್ ಪುಟ್ಟಪ್ಪನವರು ಹೇಳುವಂತೆ ಮನುಷ್ಯನು ತನ್ನ ಮಕ್ಕಳಿಗೆ ಏನನ್ನಾದರೂ ಬಿಟ್ಟು ಹೋಗುವುದಿದ್ದರೆ ಬ್ಯಾಂಕಿನ ಠೇವಣಿಯನ್ನಲ್ಲ. ಒಳ್ಳೆಯ ಪುಸ್ತಕಗಳಿಂದ ತುಂಬಿದ ಮನೆ, ಉತ್ತಮ ವಿಚಾರಧಾರೆಯ ಗ್ರಂಥಗಳನ್ನು ಬಿಟ್ಟುಹೋಗಬೇಕು ಅದು ಮನುಷ್ಯನಿಗೆ ಬೇಕಾದ ನಿಜವಾದ ಸಂಪತ್ತು.

ಈ ಕಂಪ್ಯೂಟರ್ ಯುಗದಲ್ಲಿ ಓದುವ ಹವ್ಯಾಸ ಕಡಿಮೆಯಾಗುತ್ತಿದೆ ಎಂದು ಹೇಳುವುದು ಅಲ್ಲಲ್ಲಿ ಕೇಳುತ್ತಿದೆ. ಓದುವುದಕ್ಕಾಗದವರ ಓದುವ ಅಭ್ಯಾಸವಿಲ್ಲದ ಸೋಮಾರಿಗಳ ಸಾರ್ವಜನಿಕ ಗೋಣಗು ಇದು. ಓದುವ ಹವ್ಯಾಸ ಬೆಳೆಸಿ ಕೊಂಡವರು ಎಂತಹ ಪ್ರಸಂಗದಲ್ಲೂ ಅಧ್ಯಯನ ನಿಲ್ಲಿಸುವುದಿಲ್ಲ.

ಓದು ಒಂದು ಕಲೆ, ಆ ಕಲೆಯನ್ನು ಬಲ್ಲವರು ಮಾತ್ರ ಸುಖ ಸಂಪಾದಿಸಬಹುದು. ಏನನ್ನು ಓದಬೇಕು, ಎಷ್ಟನ್ನು ಓದಬೇಕು ಹೇಗೆ ಓದಬೇಕು ಎಂಬುದು ಈ ಕಲೆಯ ಸೂತ್ರಗಳು. ನಾವು ದುಃಖಿಗಳು, ನತದೃಷ್ಟರು ಎಂಬ ಮಾತಿಗೆ ದುಃಖದ ಬೀಗದ ಕೈ ನಮ್ಮಲ್ಲೇ ಇದೆ. ಇಂತಹ ನಿರಾಶೆಯ ದುಃಖದ ವ್ಯಾಕುಲತೆಯ ಸಂದರ್ಭವೇ ಇರಲಿ ಒಂದು ಒಳ್ಳೆಯ ಪುಸ್ತಕವನ್ನು ಆರಿಸಿಕೊಂಡು ಓದುವ ಹವ್ಯಾಸ ಒಂದಿದ್ದರೆ ಅದರಲ್ಲೇ ಇದೆ ಸುಖ, ಪ್ರೇಮ. ಅದೇ ನಿಜವಾದ ಪುಸ್ತಕ ಪ್ರೇಮ.



ಜಿಲ್ಲಾಮಟ್ಟದ ಕ್ರೀಡಾಕೂಟಕ್ಕೆ ಆಯ್ಕೆಯಾದ ಶ್ರೀ ಸಿದ್ಧಗಂಗಾ ಹಿರಿಯ ಪ್ರಾಥಮಿಕ ಶಾಲೆಯ ವಿದ್ಯಾರ್ಥಿಗಳು ಮುಖ್ಯೋಪಾಧ್ಯಾಯರು ಮತ್ತು ದೈಹಿಕ ಶಿಕ್ಷಕರೊಂದಿಗೆ



ರಾಜ್ಯಮಟ್ಟಕ್ಕೆ ಆಯ್ಕೆಯಾಗಿರುವ ಶ್ರೀ ಸಿದ್ಧಲಿಂಗೇಶ್ವರ ಸನಿವಾಸ ಪ್ರೌಢಶಾಲೆಯ ವಿದ್ಯಾರ್ಥಿಗಳು ಪರಮಪೂಜ್ಯ ಶ್ರೀ ಶ್ರೀಗಳವರು, ಕಿರಿಯ ಶ್ರೀಗಳವರು, ಮುಖ್ಯೋಪಾಧ್ಯಾಯರು ಮತ್ತು ದೈಹಿಕ ಶಿಕ್ಷಕರುಗಳೊಂದಿಗೆ



# ನಿಸರ್ಗೋಪಚಾರದಲ್ಲಿ ಚೇತನ ತತ್ವ

## ಪ್ರಾಕೃತಿಕ ಚಿಕಿತ್ಸೆಯಲ್ಲಿ ಪ್ರಥಮ ಚಿಕಿತ್ಸಕ ಪರಮಾತ್ಮ

-ಜಿ.ವಿ.ವಿ. ಶಾಸ್ತ್ರಿ
'ನಿಸರ್ಗ ಯೋಗಧಾಮ' ನಂ. ೨/೨೦೫೫, ೧೧ನೇ ಕ್ರಾಸ್,
ಎಸ್.ಎಸ್.ಪುರಂ, ತುಮಕೂರು -೫೭೨ ೧೦೨. ದೂರವಾಣಿ : (೦೮೧೬) ೨೨೭೮೫೫

**ಮ**ಗುವಿಗೆ ಮೈ ಸುಡುತ್ತಿದೆ. ತಕ್ಷಣದ ಕೆಲಸವೇನು? ಡಾಕ್ಟರೆಡೆಗೆ ಓಟ. ಅಷ್ಟಕ್ಕೆ ನಿಲ್ಲುವುದೇ ಕಾರ್ಯಕ್ರಮ. ಶಾಪಿನಿಂದ ಬಂದ ಕೂಡಲೇ ದೇವರ ಮನೆಗೆ ಹೋಗಿ ನಾಲ್ಕಾಣೆಯನ್ನು ಮನೆಯ ದೇವರು ತಿರುಪತಿ ತಿಮ್ಮಪ್ಪನಿಗೆ ಮುಡಿಪು ಕಟ್ಟುವುದು. ಮಗುವಿನ ಜ್ವರ ವಾಸಿಯಾದರೆ 'ಮಂಡೆ' ಕೊಡುವ ಆಶ್ವಾಸನೆ. ಒಂದೆರಡು ಗಂಟೆ ಕಾಯುವುದು, ನಂತರ ನರ್ಸಿಂಗ್ ಹೋಂಗೆ ಸೇರಿಸುವುದು. ಜತೆಯಲ್ಲಿಯೇ ಯಂತ್ರ, ಮಂತ್ರ, ತಂತ್ರಗಳನ್ನು ಮಾಡಿಸುವುದು. ಅಷ್ಟರಲ್ಲಿ ಕಾಯಿಲೆ ವಾಸಿಯಾಗಿರುತ್ತದೆ. ಯಾವುದರಿಂದ ವಾಸಿಯಾಯಿತೆಂದು ಹೇಳಲು ಬರುವುದಿಲ್ಲ. ಒಟ್ಟಿನಲ್ಲಿ ನಮಗೆ ಎಲ್ಲದರಲ್ಲಿ ನಂಬಿಕೆ.

*ನನಗೆ ಎಲ್ಲದರಲ್ಲಿ ನಂಬಿಕೆ, ಪ್ರಕೃತಿಯ ಬಗ್ಗೆ ಅಪನಂಬಿಕೆ*
*ಏಕೆ ಹೀಗೆ ತಾಯಿ? ನಾ ಡೊಂಕು ಬಾಲದ ನಾಯಿ!*

ಅದು ಹೋಗಲಿ, ಪರಮಾತ್ಮನ ಬಗ್ಗೆ ನಮಗಿರುವ, ನಂಬಿಕೆಯಾದರೂ ಎಂತಹುದು? ನಮ್ಮ ನಾಲ್ಕಾಣೆ, ನಮ್ಮ ಎಳೆಯ ತೆಂಗಿನಕಾಯಿ, ಕಡೆಗೆ ನಮ್ಮ 'ಮಂಡೆ' ಇದ್ಯಾವುದರ ಬಡತನ ಆ ದೇವರಿಗಿದೆ? ನಮಗೆ ಕಾಯಿಲೆ ಕೊಟ್ಟು ಕಾಯಿ ಬಾಳೇಕಾಯಿಯನ್ನು ವಸೂಲು ಮಾಡಬೇಕೆ? ನಮ್ಮ ಆಸ್ತಿಕತೆ ಇಲ್ಲಿಗೆ ಮುಕ್ತಾಯ. ಕಾಯಿಲೆ ವಾಸಿಯಾದರೆ ಅವನು ಬಚಾವ್. ಮಗುವೇನಾದರೂ ಗೋತಾ ಹೊಡೆದರೆ ಪ್ರಾರಂಭ ಅವನಿಗೆ ಬೈಗಳು. ನಮ್ಮ ಲಂಚದ ಬುದ್ಧಿಯನ್ನೇ ಇಲ್ಲೂ ಬೆಳೆಸುತ್ತೇವೆ. ಇದಕ್ಕೆಲ್ಲಾ ಕಾರಣ ಪರಮಾತ್ಮನ ಬಗ್ಗೆ ನಮಗಿರುವ ತಪ್ಪು ಕಲ್ಪನೆ, ಪ್ರಕೃತಿಯ ಬಗ್ಗೆ ನಮಗಿರುವ ತಿರಸ್ಕಾರ.

ಪ್ರಶ್ನೆ : ಪರಮಾತ್ಮನನ್ನು ಬಿಟ್ಟು ಪ್ರಾಕೃತಿಕ ಉಪಚಾರ ನಡೆಯಲಾರದೆ?

'ನಮ್ಮ ಕೈಲಾದುದನ್ನು ನಾವು ಮಾಡಿದ್ದೇವೆ, ಉಳಿದದ್ದು ದೈವೇಚ್ಛೆ'- ಇದು ಎಲ್ಲಾ ಪದ್ಧತಿಯ ವೈದ್ಯರೂ ಕಡೆಗೆ ಹೇಳುವ ಮಾತು. ಎಲ್ಲಾ 'ಪತಿ'ಗಳ ಪರ್ಯವಸಾನ ತಿರುಪತಿಯಲ್ಲಿಯೇ!. ಅಲೋಪತಿ, ಹೋಮಿಯೋಪತಿ, ನ್ಯಾಚುರೋಪತಿ ಕಡೆಗೆ ತಿರುಪತಿ! ಆದರೆ ನ್ಯಾಚುರೋಪತಿಯನ್ನು ತಿರುಪತಿಯಿಂದಲೇ ಪ್ರಾರಂಭಿಸಬೇಕು. ತಿರುಪತಿ ಅಂದರೆ ಪರಮಾತ್ಮನಿಂದ. ನಾವು ನಂಬಿರುವುದು ನಾವು ಕಂಡು ಹಿಡಿದಿರುವ ಔಷಧಿ. ಇದಕ್ಕೆ ಮೊದಲ ಮನ್ನಣೆ. ದೇವರ ಹೆಸರು ಹೇಳಿದರೂ ಅದು 'ನಾಮ್ ಕಾ ವಾಸ್ತೇ'. ಆದ್ದರಿಂದಲೇ ದೇವರ ಧ್ಯಾನದ ಕಡೆಯಲಿ. ಆದರೆ ಪ್ರಾಕೃತಿಕ ಉಪಚಾರದಲ್ಲಿ ನಾವು ಕಂಡು ಹಿಡಿಯುವ ಯಾವ ಔಷಧವೂ ಇಲ್ಲದಿರುವುದರಿಂದ ಪರಮಾತ್ಮನಿಂದಲೇ ಪ್ರಾರಂಭಿಸಬೇಕಾದ ಅನಿವಾರ್ಯತೆ ಉಂಟಾಗಿದೆ. ನಮಗೆ ಬಂದ ರೋಗ ಹೇಗೋ ನಡೆಯುತ್ತದೆ. ಆದರೆ ನಮ್ಮ ಮಕ್ಕಳಿಗೆ ಬಂದ ಕಾಯಿಲೆಗಳು! ಅದನ್ನು ನೋಡಿಯೇ ನಮ್ಮ ಕೈಕಾಲುಗಳು ನಡುಗಲು ಪ್ರಾರಂಭವಾಗುತ್ತದೆ. ಬೇರೆಯ ಪದ್ಧತಿಯನ್ನು ನಂಬಿರುವವರು ವೈದ್ಯರ ಮೇಲೆ ಜವಾಬ್ದಾರಿಯನ್ನು ಹಾಕಿ ಹಾಯಾಗಿರುತ್ತಾರೆ. ಪ್ರಾಕೃತಿಕ ಉಪಚಾರ ಮಾಡುವವರ ಗತಿ ಏನು? ನಮ್ಮ ಸುತ್ತಲಿನವರೆಲ್ಲಾ ನಮ್ಮ ಸಲಹೆಗಾರರಾಗಿ ನಮ್ಮ ತಲೆಯನ್ನು ತಿಂದು ಬಿಡುತ್ತಾರೆ. ಮೊದಲೇ ತೀವ್ರರೋಗದ ರೂಪ ಭಯಂಕರ. ಹೆದರಿಸಲು ಬಂಧು ಬಾಂಧವರು. ಮೊದಲೇ ನಮಗೆ ನಿಸರ್ಗದ ಬಗ್ಗೆ ನಂಬಿಕೆ ಕಡಿಮೆ. ಇಂತಹ ಸನ್ನಿವೇಶವನ್ನು ನಿಭಾಯಿಸಲು ನಮಗೆ ಪರಮಾತ್ಮನ ಆಸರೆ ಇಲ್ಲದೆ ಬೇರೆ ಯಾವುದು ಸಹಾಯಕ್ಕೆ ಬರುತ್ತದೆ? ಆ ಸನ್ನಿವೇಶವನ್ನು ನೀವು ಅನುಭವಿಸಿದಾಗಲೇ ಅರ್ಥವಾಗುವುದು. ಒಂದು ಕಡೆ ರೋಗದಿಂದ ನರಳುತ್ತಿರುವ ಮಗು, ಮತ್ತೊಂದು ಕಡೆ ದೈನ್ಯದಿಂದ ಕಣ್ಣೀರು ಸುರಿಸುತ್ತಿರುವ ಪತ್ನಿ. ನಿಮಗೆ ಸಲಹೆ ಕೊಡುತ್ತಾ ನಿಮ್ಮ ಪತ್ನಿಯ ಧೈರ್ಯವನ್ನು ತೆಗೆಯುತ್ತಿರುವ ನೆರೆ-ಹೊರೆಯವರು. ಈಗಿನ ನಿಮ್ಮ ಸ್ಥಿತಿಯು ಮಾರಮ್ಮನಿಗೆ ಬಲಿಕೊಡಲು ತೆಗೆದುಕೊಂಡೂ ಹೋಗುತ್ತಿರುವ ಕುರಿಯದಕ್ಕಿಂತ ಕಡೆ. ಇಂತಹ ಕಾಲದಲ್ಲಿ ನಿಮಗೆ ಧೈರ್ಯ ಎಲ್ಲಿಂದ? ಕಷ್ಟ ಬರುವವರೆವಿಗೂ ಎಲ್ಲರೂ ಧೀಮಂತರೇ, ವಿಚಾರವಾದಿಗಳೇ, ವಿಜ್ಞಾನಿಗಳೇ, 'ದೇವರೆಲ್ಲಿದ್ದಾನೆ? ಎಲ್ಲಾ ಮೂಢನಂಬಿಕೆ' ಎಂದು ತೆಗಳುವವರೇ. ನಿಜವಾಗಿಯು ಕಷ್ಟಕ್ಕೆ ಸಿಕ್ಕಿದಾಗ ನಾಯಿಮರಿಯಂತೆ ಕುಯ್ಗುಟ್ಟುವವರೇ! ಆದರೆ, ದೇವರ ನಂಬಿಕೆ ಒಂದು ಮೂಢ'ನಂಬಿಕೆಂಯಾಗಬಾರದು. 'God is Great Mathematician' ಎಂದ, ಕಳೆದ ಶತಮಾನದ ಶ್ರೇಷ್ಟ ವಿಜ್ಞಾನಿ ಐನ್‌ಸ್ಟೀನ್. ಹೆಚ್ಚು ಹೆಚ್ಚು ಪ್ರಯೋಗಗಳನ್ನು ಮಾಡಿದಷ್ಟೂ ವಿಜ್ಞಾನಿಗಳ ಅರಿವಿಗೆ ಬರುತ್ತದೆ. ಈ ವಿಶ್ವವೆಲ್ಲಾ ಎಂತಹ ನ್ಯಾಯ ಹಾಗೂ ಕ್ರಮಬದ್ಧವಾಗಿದೆ ಎಂದು. ಅದಕ್ಕೆ ಅವನ ಉದ್ಗಾರ. 'God is a Law and Order'. ಅಣು, ರೇಣು, ತೃಣ, ಕಾಷ್ಟಗಳಿಂದ ಹಿಡಿದು ಸೂರ್ಯ, ಚಂದ್ರ, ನಕ್ಷತ್ರ,





ನೀಹಾರಿಕಾದವರೆವಿಗೂ, ಪಿಂಡಾಂಡದಿಂದ ಹಿಡಿದು ಬ್ರಹ್ಮಾಂಡವರೆವಿಗೂ ಎಂತಹ ಕ್ರಮಬದ್ಧವಾದ ನಿಯಮ!. ಹಾಗಿಲ್ಲದಿದ್ದರೆ ಎಂದೋ ಆಕಾಶಕಾಯಗಳು ಒಂದಕ್ಕೊಂದು ಅಪ್ಪಳಿಸಿ ಈ ವಿಶ್ವವೇ ಇರುತ್ತಿರಲಿಲ್ಲ. ಅದೊಂದು ಅಗೋಚರ ಶಕ್ತಿ. ಅದಕ್ಕೆ ಮಣಿಯುವುದರಲ್ಲೇ ನಮ್ಮ ಒಳಿತಿದೆ. `If there is no God create one' ಎಂಬ ನುಡಿ ನಮಗೆ ತಮಾಷೆಯಾಗಿ ಕಂಡರೂ ಅದರ ಹಿಂದಿರುವ ತತ್ವ ಚಿಂತನೀಯ. ಆ ಶಕ್ತಿಯನ್ನರಿತು ನಡೆಯುವುದು ಹೇಗೆ? ಪ್ರಕೃತಿಯ ಮುಖಾಂತರ.

*ಅವನು ಈ ವಿಶ್ವದ ನಿಯಾಮಕ ನಾವು ಆದರೆ*
*ಅವನ ಸೇವಕ, ಆಗ ಆಗುವುದು ನಮ್ಮ ಚಿಂತೆ ದೂರ*
*ಕರಗುವುದು ನಮ್ಮ ರೋಗವೆಂಬ ಭಾರ.*
*ನಮ್ಮ ಮಾರ್ಗದರ್ಶನಕಿಹಳು ಪ್ರಕೃತಿ, ಅವಳು ಅವನ*
*ಸಹವರ್ತಿ ಅವಳು ನಮ್ಮ ತಾಯಿ, ಆಗುವಳು ನಮ್ಮ*
*ಮಾರ್ಗದಾಯಿ. ಹಾಗಲ್ಲದೆ ಅವಳನು ಸೇವಕಳೆಂದು*
*ತಿಳಿದರೆ ಕಾಣುವುದಿಲ್ಲವೇ ಉರಿಯುತಿಹ ಈ ಧರೆ!*
*ಪಂಚಭೂತಗಳಿಂದ ಕಟ್ಟಿದುದು ಈ ಮನೆ*
*ಪರಮಾತ್ಮ ಒಳಗೇ ಕುಳಿತು ನೋಡುತಿಹನು ಸುಮ್ಮನೆ*
*ಪ್ರಕೃತಿಯನು ಮಾಡಿಹನು ಎಲ್ಲದಕೂ ಕಾರಣ*
*ಅವಳೇ ಅವನ ಹೊರ ಆವರಣ*
*ರೋಗಗಳಲಿ ಅವಳನು ಬಿಟ್ಟು ಎಲ್ಲಿ ಹೋಗುವೆ?*
*ಸುಮ್ಮನೆ ಅಲ್ಲಿ ಇಲ್ಲಿ ಏಕೆ ತಡಕಾಡುವೆ?*
*ಗೊಂದಲವ ಬಿಟ್ಟವಳನು ನಂಬು ಆ ನಂಬಿಕೆ ನಿನಗೆ*
*ನೀಡುವುದು ಇಂಬು*
*ಅವಳನು ನಂಬುವೆಯಾ? ಅದು ಹೇಗೆ ಸಾಧ್ಯವಯ್ಯಾ?*
*ಅವಳ ಮತ್ತೊಂದು ಹೆಸರು ಮಾಯೆ.*
*ಅರ್ಥಮಾಡಿಕೊಳ್ಳಲು ಬೇಕು ಅವನ ದಯೆ.*
*ಪ್ರಕೃತಿ ಚಿಕಿತ್ಸೆಯಲಿ ಅವನದು ಪ್ರಥಮ ಪಾತ್ರ*
*ಪ್ರಕೃತಿ ಆಗಿಹಳು ಇಬ್ಬರಿಗೂ ಹತ್ರ*
*ಆದ್ದರಿಂದ ಅವನನು ಮೊದಲು ಪ್ರಾರ್ಥಿಸು*
*ಆಗಷ್ಟೆ ಆಗುವುದು ಗಟ್ಟಿ ನಿನ್ನ ಮನಸು*
*ಆ ಪ್ರಾರ್ಥನೆಯಾದರೂ ಹೇಗಿರಬೇಕು? 'ಅದು ಬೇಕು'*
*'ಇದು ಬೇಕು' 'ಬೇಕು'ಗಳ ಪಟ್ಟಿ ಸಾಕು.*
*'ನಿನ್ನ ನಿಯಮದಂತೆ ಈ ಸಕಲ ಲೋಕ ನೀ ಈ*
*ಎಲ್ಲದರ ಮಾಲೀಕ ರೋಗ ರುಜಿನಗಳೆಲ್ಲ ನೀ ನನ್ನ*
*ತಿದ್ದುವಾ ರೀತಿ ಅದಕಿಲ್ಲ ನನಗೆ ಯಾವುದೇ ಭೀತಿ.*
*ನಿನ್ನ ಮಾರ್ಗವನು ಬಿಡದವಲ ನೀನನಗೆ ನೀಡು*
*ಅದನನುಸರಿಸುವ ಬಲ*
*ಬೇಡುವೆನು ಜ್ಞಾನವನು ನಿನ್ನಲ್ಲಿ*
*ಜ್ಞಾನಕೂ ಸಹ ನೀನೆ ಒಡೆಯ*
*ತೋರು ನೀ ನನ್ನ ಮೇಲೆ ದಯ*

ದೇವರು ಎಂಬ ಕಲ್ಪನೆಯನ್ನು ತಂದಾಗ ಗೊಂದಲಕ್ಕೆ ಬೀಳುವುದು ಸಹಜ. ಕೋಟ್ಯಾನುಕೋಟಿ ದೇವರಲ್ಲಿ ಯಾರನ್ನು ಪ್ರಾರ್ಥಿಸಬೇಕು ?

*ದೇವನೊಬ್ಬ ನಾಮ ಹಲವು ರೋಗ ಒಂದು ರೂಪ ಕೆಲವು*

### ನನ್ನ ರಾಮ :

'ನಿಸಗ್ರ ಚಿಕಿತ್ಸಕನ ಬತ್ತಳಿಕೆಯಲಿ ರಾಮನಾಮವು ಮಹಾ ಅಸ್ತ್ರ. ನಿಸರ್ಗ ಚಿಕಿತ್ಸೆಯಲ್ಲಿ ಎರಡು ಭಾಗಗಳು. ರಾಮನಾಮದ ಪುನಶ್ಚರಣೆಯನ್ನು ಮಾಡಿ ವ್ಯಾಧಿಗಳನ್ನು ವಾಸಿಮಾಡಿಕೊಳ್ಳುವುದು ಒಂದು, ಎರಡನೆಯದು ಆರೋಗ್ಯ ನಿಯಮಗಳನ್ನು ಅನುಸರಿಸಿ ಜೀವಿಸುತ್ತಾ ರೋಗ ನಿರೋಧ ಮಾಡುವುದು.. ಪ್ರಕೃತಿ ಚಿಕಿತ್ಸೆ ಪೂರ್ಣವಾಗಿ ಭಗವಂತನ ನಾಮಸ್ಮರಣೆಯ ಸುತ್ತಾ ಬೆಳೆಯುತ್ತದೆ.

ರಾಮಸ್ಮರಣೆ ಅಥವಾ ರಾಮಧ್ಯಾನ ಕೇವಲ ಹಿಂದೂಗಳಿಗೆ ಅನ್ವಯಿಸುವುದೆಂದೂ ಆದುದರಿಂದ ಮುಸಲ್ಮಾನರು ಅದರಲ್ಲಿ ಹೇಗೆ ಭಾಗವಹಿಸಲು ಶಕ್ಯವೆಂದೂ ಆಕ್ಷೇಪವೆತ್ತುವುದನ್ನು ಕೇಳಿದರೆ ನನಗೆ ನಗು ಬರುತ್ತದೆ. ಮುಸಲ್ಮಾನರಿಗೆ ಬೇರೆ, ಹಿಂದೂ, ಫಾರಸಿ, ಕ್ರೈಸ್ತರಿಗೆ ಬೇರೆ ಬೇರೆ ದೇವರಿದ್ದಾನೆಯೇ? ಇಲ್ಲ. ಸರ್ವಶಕ್ತನೊಬ್ಬನೇ. ಅವನು ಸರ್ವಾಂತರ್ಯಾಮಿ. ಅವನಿಗೆ ಬೇರೆ ಬೇರೆ ಹೆಸರುಗಳು. ನಮಗೆ ಯಾವುದು ಚಿರಪರಿಚಿತವೋ ಅದರಿಂದ ಸ್ಮರಿಸುತ್ತೇವೆ.

ನನ್ನರಾಮ- ನಮ್ಮ ಪ್ರಾರ್ಥನೆಯ ರಾಮ, ಚಾರಿತ್ರಿಕ ವ್ಯಕ್ತಿ, ಆಯೋಧ್ಯಾಪತಿ, ದಶರಥ ಮಹಾರಾಜನ ಮಗ ರಾಮನಲ್ಲ. ಅವನು ಸನಾತನ, ಅಜ, ಅದ್ವಿತೀಯ ಅವನನ್ನೇ ನಾನು ಧ್ಯಾನಿಸುವುದು. ಅವನ ನೆರವನ್ನೇ ನಾನು ಬೇಡುವುದು. ಹಾಗೆಯೇ ನೀವೂ.

'ಅವನು ಎಲ್ಲರಿಗೂ ಸೇರಿದವನು. ಆದ್ದರಿಂದ ಮುಸಲ್ಮಾನರೇ ಆಗಲಿ ಯಾರೇ ಆಗಲಿ ನಾಮಸ್ಮರಣೆ ಮಾಡಲು ಏಕೆ ಆಕ್ಷೇಪವೆತ್ತಬೇಕೋ ನನಗೆ ಅರ್ಥವಾಗದು' - ಮಹಾತ್ಮ ಗಾಂಧಿಯವರ 'ಹರಿಜನ' ಪತ್ರಿಕೆಯಿಂದ ಆಯ್ದ ಕೆಲವು ವಾಕ್ಯಗಳು.

ಭಾರತವು ಇಷ್ಟೊಂದು ಆಸ್ತಿಕರ ನಾಡು, ಏಕೆ ಆಗಿದೆ ಇಷ್ಟೊಂದು ರೋಗಗಳ ಬೀಡು? ನಮಗೆ ದೇವರಲಿ ಮೂಢ ನಂಬಿಕೆಯೇ ವಿನಃ ಅವನ ನಿಯಮಗಳ ಬಗ್ಗೆ ನಿಗಾ ಇಲ್ಲ. ಆದ್ದರಿಂದಲೇ ಈ ಬವಣೆ.

'ಪ್ರಕೃತಿ ಚಿಕಿತ್ಸೆಯು ಆದರ್ಶ ಜೀವನ ವಿಧಾನವನ್ನು ಸೂಚಿಸುತ್ತದೆ.' - 'ಹರಿಜನ' 26-1946.
ಬರೀ ಚೂಚಿಸುವುದಷ್ಟೇ ಅಲ್ಲ ಬಯಸುತ್ತದೆ.

'ದೇವರು ಆಪತ್ತಿನ ಸಮಯದಲ್ಲಿ ಭಕ್ತನ ಕೈಬಿಡದೆ ಸಲಹುವನು. ಆದರೆ, ಚೈತನ್ಯಮಯನಲ್ಲಿ ಅನನ್ಯ ನಂಬಿಕೆ ಅವಶ್ಯಕ. ಈ ಶ್ರದ್ಧೆಯ ಲಕ್ಷಣ ಹೀಗೆ ; ನಮ್ಮ ಕರ್ತವ್ಯವನ್ನೆಲ್ಲಾ ಮಾಡಿ ಕೊನೆಯದಾಗಿ ದೇವರಿಂದ ಬರುವ ಸುಖವೋ,

ಅದೃಷ್ಟವೋ, ದುರಾದೃಷ್ಟವೋ, ಆನಂದದಿಂದ ಸ್ವೀಕರಿಸಬೇಕು.'
-ಮಹಾತ್ಮಾ ಗಾಂಧೀಜಿ.

ದೇವರ ನಿಯಮ, ಅದನ್ನೇ 'ಧರ್ಮ' ಎನ್ನುವುದು. ಅದರ ಅಣತಿಯಂತೆ ನಡೆದರೆ ದುಃಖ ಬರುವ ಸಾಧ್ಯತೆಯೇ ಇಲ್ಲ. ಬಂದರು ಸಹ ಆ ಸುಃಖ ನಮ್ಮ ಒಳಿತಿಗಾಗಿಯೇ ವಿನಃ ಶಿಕ್ಷಿಸಲು ಅಲ್ಲ. ರೋಗವೂ ಸಹ ಇದೇ ತತ್ವದಂತೆ ಬಂದಿದೆ. ಅದು ನಮ್ಮನ್ನು ನಿಸರ್ಗ ತಿದ್ದುವ ರೀತಿ. ಈ ರೀತಿ ಅರ್ಥೈಸಿಕೊಂಡಾಗ ರೋಗದ ಭೀತಿ ಹೋಗುತ್ತದೆ. ಇದು ಬರೀ ವೇದಾಂತದ ಅರ್ಥದಲ್ಲಲ್ಲ ವೈಜ್ಞಾನಿಕವಾಗಿಯೂ ರೋಗ ನಮ್ಮ ಗೆಳೆಯನೆಂದು ಹಿಂದೆಯೇ ಹೇಳಿದೆ. ನಮ್ಮ ಮನಸ್ಸು ದೃಢವಾಗಿದ್ದಾಗ ಸಾಧನೆ ಮಾಡಲು ಸಾಧ್ಯವಾಗುತ್ತದೆ. ಸಾಧನೆ ಮಾಡಿದರೆ ರೋಗ ದೂರವಾಗುತ್ತದೆ. ಅದಕ್ಕೆ ಮೊದಲ ಮೆಟ್ಟಿಲು ದೇವರಲ್ಲಿನ ನಂಬಿಕೆ ಹಾಗೂ ಅವನ ನಿಯಮದಂತೆ ನಡವಳಿಕೆ. ಪರಮಾತ್ಮ ಸೂಕ್ಷ್ಮ ತತ್ವ ನಮಗೆ ರೋಗ ಬಂದಿರುವುದು ಸ್ಥೂಲ ಶರೀರದಲ್ಲಿ. ಈ ಸ್ಥೂಲದ ನಿಯಂತ್ರಣ ಆ ಸೂಕ್ಷ್ಮ ತತ್ವದಿಂದಲೇ. ಆದ್ದರಿಂದ ಅದಕ್ಕೆ ಮೊದಲ ಗಮನ ಹಾಗೂ ನಮನ.

*ಗಾಂಧೀಜಿ ನಂಬಿದರು ಆ ಎರಡಕ್ಷರ ಅದೆಷ್ಟು ಸರಳ,*
*ಸುಲಭ, ಸುಂದರ ರಾಮ ಬಿಟ್ಟಿ ಬೇರೆಲ್ಲ ಹೆಸರಿಗೂ*
*ಒತ್ತಕ್ಷರ ಅವೆಲ್ಲಾ ಉಚ್ಚಾರಣೆಗೆ ಬಹಳ ದುಸ್ತರ*
*ಕೃಷ್ಣ ಆನುವುದೂ ಕೂಡ ಕೊಂಚ ಕ್ಲಿಷ್ಟ*
*ರಾಮ ಅನ್ನಲು ಬೇಕಿಲ್ಲ ಅಷ್ಟೂ ಕಷ್ಟ*
*ರೋಗದಲಿ ನೋವು ಬೇರೆ ಹೊರಗಿನಿಂದ ಹೇರಲೇಕೆ*
*ಕ್ಲಿಷ್ಟ ನಾಮದಾ ಹೊರೆ?*
*ಆದ್ದರಿಂದಲೇ ಸಾಕು ರಾಮ ಎಂಬ ಸರಳ ನಾಮ*
*ಗಾಂಧಿಜಿಗೆ ಅಧಮ್ಯ ಚೇತನವಾಯ್ತು ಆ ರಾಮನಾಮ*
*ನಂಬಿಯೂ ನಂಬದ ನಮಗೆ ಬರೀ ಪಂಗನಾಮ*
*ರಾಮನಾಮ ಆಗಬೇಕಿತ್ತು ಎಲ್ಲಕೂ ಮೊದಲ ಚಿಕಿತ್ಸೆ*
*ನಾವು ಮಾಡಿದೆವು ಅದನು ಅಂತ್ಯ ಚಿಕಿತ್ಸೆ*
*ಆದರೆ ಪ್ರಾಕೃತಿಕ ಉಪಚಾರದಲಿ ಅದು ಆಗಬೇಕು*
*ಪ್ರಥಮ ಚಿಕಿತ್ಸೆ. ಪ್ರಕೃತಿ ಚಿಕಿತ್ಸೆಯಲ್ಲಿ ಪ್ರಥಮ ಚಿಕಿತ್ಸಕ*
*ಪರಮಾತ್ಮ ನಂತರ ಅವನಣತಿಯಂತೆ ಕೈಹಾಕುವನು*
*ಜೀವಾತ್ಮ. ಪರಮಾತ್ಮ ಜೀವಾತ್ಮರಿಬ್ಬರೂ ಚೇತನ ತತ್ವ*
*ಅವರಿಬ್ಬರಿಲ್ಲದೇ ನಡೆಯದು ರೋಗ ನಿವಾರಣತ್ವ*
*ಪರಮಾತ್ಮನೊಂದು ದೊಡ್ಡ ಬ್ಯಾಟರಿ, ಜೀವಾತ್ಮನನು*
*ನಿತ್ಯವೂ ಅದರಿಂದ ಛಾರ್ಜ್ ಮಾಡಿರಿ*
*ರೋಗದಲಿ ಪರಮಾತ್ಮನಲಿ ಮೊರೆ*
*ಆಗ ಜೀವಶಕ್ತಿಗಾಗದು ಹೊರೆ*
*ಇದೇ ರೋಗ ದೂರ ಮಾಡಿಕೊಳ್ಳುವ ಉಪಾಯ*
*ಮಿಕ್ಕ ಅಲೆದಾಟವದು ಶರೀರಕೆ ಅಪಾಯ.*

– ಮುಂದುವರೆಯುತ್ತದೆ.

## ಕಣನೂರು ಮಕ್ಕಳದೇವರ ಮಠದ ಲಿಂ. ಶ್ರೀ ಶಾಂತವೀರಸ್ವಾಮಿಗಳ ಪುಣ್ಯಾರಾಧನೆ ಮತ್ತು ಮಕ್ಕಳ ದೇವರ ದೇವಾಲಯ ಉದ್ಘಾಟನೆ,

ಮಾಗಡಿ ತಾಲ್ಲೂಕು ಕಣನೂರು ಮಕ್ಕಳದೇವರಮಠದಲ್ಲಿ ದಿನಾಂಕ 22-08-2006ರಂದು ನಡೆದ ಲಿಂಗೈಕ್ಯ ಶ್ರೀ ಶಾಂತವೀರಸ್ವಾಮಿಗಳ ಸಂಸ್ಮರಣೋತ್ಸವ, ಮಕ್ಕಳ ದೇವರ ದೇವಾಲಯ ಉದ್ಘಾಟನೆ, ಮಲ್ಲೇಶ್ವರ ಸ್ವಾಮಿ ದೇವಾಲಯದ ಶಿಲಾನ್ಯಾಸ ಸಮಾರಂಭದ ಸಾನ್ನಿಧ್ಯ ವಹಿಸಿ ಶ್ರೀಗಳು ಆಶೀರ್ವಚನ ನೀಡಿದರು.

ಮಾನವರಲ್ಲಿ ಈಗ ನೈತಿಕ ಸಂಪತ್ತು ಕುಸಿಯುತ್ತಿದೆ. ಧರ್ಮದ ಬಗ್ಗೆ ಅಸಡ್ಡೆ ಉಂಟಾಗುತ್ತಿದೆ. ಸಾಮಾಜಿಕ, ಮಾನಸಿಕ ಶಾಂತಿ, ಕದಡುತ್ತಿದೆ ಎಂದು ಶ್ರೀ ಸಿದ್ಧಗಂಗಾ ಮಠದ ಡಾ॥ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳು ವಿಷಾಧಿಸಿದರು. ಮನುಷ್ಯನಿಗೆ ಈಗ ಎಲ್ಲಾ ಸೌಕರ್ಯಗಳಿರಬಹುದು. ಆದರೆ ಶಾಂತಿ ಜೀವನದಿಂದ ವಂಚಿತನಾಗಿದ್ದಾನೆ. ಹಣ ಸಂಪಾದನೆಯಿಂದ ಮನುಷ್ಯ ಮುಂದು ವರೆಯಲಾರ. ಸಂಸ್ಕಾರವಂತಿಕೆ ಬೆಳೆಸಿಕೊಂಡಾಗ ಮಾತ್ರ ಆತ ಉತ್ತಮ ನಾಗರೀಕನಾಗಿ ಬಾಳಲು ಸಾಧ್ಯ ಎಂದ ಶ್ರೀಗಳು ಮನುಷ್ಯರನ್ನು ಸಂಸ್ಕಾರವಂತರನ್ನಾಗಿಸುವ ಕೆಲಸ ಆಗಬೇಕೆಂದು ಆಶಿಸಿದರು. ರಾಜ ಮಹಾರಾಜರು ಈ ಪ್ರಪಂಚ ಆಳಿರಬಹುದು. ಹಣ ಆಸ್ತಿ ಸಂಪಾದಿಸಿರಬಹುದು. ಆದರೆ ಸದಾಕಾಲ ಆದರ್ಶರಾಗಿ ಕಾಣುವವರು ಯಾವುದೇ ಹಣ, ಆಸ್ತಿ ಮಾಡದೆ ಜನರ ಒಳಿತಿಗಾಗಿ ಶ್ರಮಿಸಿದ ಪೈಗಂಬರ್, ಬಸವಣ್ಣ, ಬುದ್ಧ, ಗಾಂಧಿ ಮುಂತಾದವರು ಮಾತ್ರವೇ ಎಂದು ಶ್ರೀಗಳು ಹೇಳಿದರು.

ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ ಅಧ್ಯಕ್ಷ ಗೊ.ರು. ಚನ್ನಬಸಪ್ಪ ಮಾತನಾಡಿ, ಮಠಗಳು ಕೇವಲ ಪೂಜೆ, ಅಡ್ಡಪಲ್ಲಕ್ಕಿ ಉತ್ಸವಗಳಿಗೆ ಮೀಸಲಾಗದೆ ಜನಸಾಮಾನ್ಯರನ್ನು ಸ್ಪಂದಿಸುವ ಕಾರ್ಯ ಮಾಡಬೇಕೆಂದರು. ಅನಾಥಾಲಯಗಳಂತಹ ಮಾನವೀಯ ಕಾರ್ಯಕ್ರಮಗಳು ಸರ್ಕಾರದ ಮಟ್ಟದಲ್ಲಿ ವಿಫಲವಾದರೂ, ಅಂತಹ ಕಾರ್ಯಕ್ರಮಗಳನ್ನು ಮಠಗಳಿಗೆ ವಹಿಸಿ ಸರ್ಕಾರ ನೆರವು ನೀಡಲಿ ಎಂದರು.

ಕನಕಪುರ ದೇಗುಲಮಠದ ಶ್ರೀ ಮುಮ್ಮಡಿ ನಿರ್ವಾಣ ಸ್ವಾಮಿಗಳು, ಶ್ರೀ ಸಿದ್ಧಗಂಗಾ ಮಠದ ಕಿರಿಯ ಶ್ರೀಗಳಾದ ಶ್ರೀ ಸಿದ್ದಲಿಂಗ ಸ್ವಾಮಿಗಳು ಭಾಗವಹಿಸಿದ್ದರು. ಮಕ್ಕಳದೇವರ ಮಠದ ಶ್ರೀ ಮೃತ್ಯುಂಜಯ ಸ್ವಾಮಿಗಳು ಭಕ್ತಿ ಸಮರ್ಪಣೆ ಮಾಡಿದರು.

ಶಾಸಕ ಹೆಚ್.ಸಿ. ಬಾಲಕೃಷ್ಣ ಅಧ್ಯಕ್ಷತೆ ವಹಿಸಿದ್ದರು. ಮಾಜಿ ಸಚಿವ ಹೆಚ್.ಎಂ. ರೇವಣ್ಣ, ಜಿ.ಪಂ. ಸದಸ್ಯ ಶಿವರುದ್ರಪ್ಪ, ತಾ.ಪಂ. ಉಪಾಧ್ಯಕ್ಷ ಕೆ.ವೆಂಕಟೇಶ್, ಶ್ರೀ ತ್ಯಾಗರಾಜ್, ಪ್ರೊ. ಹೆಚ್.ವಿ. ವೀರಭದ್ರಯ್ಯ ಸೇರಿದಂತೆ ವಿವಿಧ ಮಠಾಧೀಶರು ಉಪಸ್ಥಿತರಿದ್ದರು.

ಈ ಸಂದರ್ಭದಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಿಂದ ನಡೆದ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ವಿದ್ವಾನ್ ಲಕ್ಷ್ಮಣದಾಸ್, ಸಿದ್ಧಲಿಂಗೇಶ್ವರರ ಕುರಿತು ಕೀರ್ತನೆ, ಕು॥ ಅಭಿನೇತ್ರಿ ಶಿವನ ನೃತ್ಯ ನಡೆಸಿಕೊಟ್ಟರು. ಸಹನಿರ್ದೇಶಕರಾದ ಶ್ರೀ ತ್ಯಾಗರಾಜ್ ಅವರನ್ನು ಅಭಿನಂದಿಸಲಾಯಿತು.





## ಸಿದ್ಧಗಂಗಾ ಪಬ್ಲಿಕ್ ಸ್ಕೂಲ್, ಚಂದ್ರಾ ಲೇಔಟ್, ಬೆಂಗಳೂರು.

### ಪದಸ್ಥಾಪನೆ ಮತ್ತು ಫಲಕ ವಿತರಣೆ



ಸಿದ್ಧಗಂಗಾ ಪಬ್ಲಿಕ್ ಶಾಲೆಯಲ್ಲಿ ೨೦೦೬-೦೭ನೇ ಸಾಲಿಗೆ ಪೂರಕವಾದ ವಿದ್ಯಾರ್ಥಿ ಪದ ಸ್ಥಾಪನೆ ಮತ್ತು ಫಲಕ ವಿತರಣಾ ಸಮಾರಂಭ ೧೫-೭-೨೦೦೬ರ ಶನಿವಾರದಂದು ನೆರವೇರಿತು.

ಈ ಅಪೂರ್ವ ಸಮಾರಂಭಕ್ಕೆ ಬೆಂಗಳೂರು ದಕ್ಷಿಣ ಜಿಲ್ಲಾ ದೈಹಿಕ ಶಿಕ್ಷಣ ನಿರೀಕ್ಷಕರಾದ ಶ್ರೀ ಹೆಚ್.ಪಿ. ವಿರೂಪಾಕ್ಷರವರು ಮುಖ್ಯ ಅತಿಥಿಗಳಾಗಿ ಆಗಮಿಸಿ ವಿದ್ಯಾರ್ಥಿಗಳಿಗೆ ಫಲಕಗಳನ್ನು ವಿತರಿಸಿದರು. ಶಾಲಾ ಕಾರ್ಯದರ್ಶಿಗಳಾದ ಶ್ರೀ ಬಿ.ಎನ್. ಚನ್ನಪ್ಪನವರು ಹಾಗೂ ಶಾಲಾ ಖಜಾಂಚಿಗಳಾದ ಶ್ರೀ ಬಿ.ಸಿದ್ಧಲಿಂಗಯ್ಯನವರೂ ಉಪಸ್ಥಿತರಿದ್ದರು. ತರಗತಿವಾರು ಪದಫಲಕಗಳನ್ನು ವಿತರಿಸಿದರು.

ಶಾಲಾ ವಿದ್ಯಾರ್ಥಿಗಳು ಕ್ರೀಡಾ ಹಾಗೂ ಶಾಲಾ ಮೌಲ್ಯಗಳನ್ನು ರಕ್ಷಿಸಿಕೊಂಡು ತಮ್ಮ ಕರ್ತವ್ಯವನ್ನು ನಿರ್ವಹಿಸುವುದಾಗಿ ಪ್ರಮಾಣ ವಚನ ಸ್ವೀಕರಿಸಿದರು. ಶಾಲಾ ಪ್ರಾಂಶುಪಾಲರಾದ ಶ್ರೀಮತಿ ಚಂಪಕ ಮಾಲಿನಿ ಯವರು ಪಠ್ಯಾಧಾರಿತ ಚಟುವಟುಕೆಗಳ ವರದಿಯನ್ನು ಪ್ರಸ್ತುತ ಪಡಿಸುತ್ತಾ ಭವಿಷ್ಯಕ್ಕೆ ಬುನಾದಿ ಯಾಗುವ ರೀತಿಯಲ್ಲಿ ವಿದ್ಯಾರ್ಥಿಗಳು ನಾಯಕತ್ವದ ಗುಣಗಳನ್ನು ಬೆಳೆಸಿಕೊಳ್ಳ ಬೇಕೆಂದು ಹಿತನುಡಿದರು.

### ಶಿಕ್ಷಕರ ದಿನಾಚರಣೆ

ಸಿದ್ಧಗಂಗಾ ಪಬ್ಲಿಕ್ ಶಾಲೆಯಲ್ಲಿ ಸರಳವಾಗಿ, ಸಂಭ್ರಮ, ಸಡಗರದಿಂದ ಶಿಕ್ಷಕರ ದಿನ ಆಚರಿಸ ಲಾಯಿತು. ಆದರ್ಶ ಗುರು ಡಾ॥ ಸರ್ವಪಲ್ಲಿ ರಾಧಾಕೃಷ್ಣನ್ ರವರ ಜನ್ಮದಿನದಂದು ಆಚರಿಸುವ ಗುರುಸ್ಮರಣೆಯ ಸುಂದರ ಸಮಾರಂಭದಲ್ಲಿ ಶಾಲೆಯ ಪ್ರಾಂಶುಪಾಲರಾದ ಶ್ರೀಮತಿ



ಚಂಪಕಮಾಲಿನಿಯವರೂ ಹಾಗೂ ಶಾಲಾ ಖಜಾಂಚಿಗಳಾದ ಶ್ರೀ ಬಿ.ಸಿದ್ದಲಿಂಗಯ್ಯ ನವರೂ ಉಪಸ್ಥಿತರಿದ್ದರು.

ಸ್ವಯಂ ಶಿಕ್ಷಕರಾಗಿದ್ದ ಶ್ರೀ ಬಿ.ಸಿದ್ದಲಿಂಗಯ್ಯ ನವರು ಮಾತನಾಡಿ ದೇಶ ನಿರ್ಮಾಣ, ಉತ್ತಮ ನಾಗರೀಕರ ಸೃಷ್ಟಿ ಮತ್ತು ವಿದ್ಯಾರ್ಥಿಗಳ ಭವಿಷ್ಯವನ್ನು ನಿರ್ಮಿಸುವಲ್ಲಿ ಶಿಕ್ಷಕರು ಸಮರ್ಪಣ ಭಾವದಿಂದ ದುಡಿಯಬೇಕು ಎಂದು ಕರೆಯಿತ್ತರು.



ವಿದ್ಯಾರ್ಥಿಗಳೆಲ್ಲರೂ ಸ್ವಯಂಪ್ರೇರಿತರಾಗಿ ತಮ್ಮ ನೆಚ್ಚಿನ ಗುರುವೃಂದಕ್ಕೆ ಶುಭಾಷಯಗಳನ್ನು ಕೋರಿದರು. ಮನರಂಜನೆಗಾಗಿ ಹಲವು ನೃತ್ಯ ಕಾರ್ಯಕ್ರಮಗಳನ್ನು ಹಾಗೂ ವಿವಿಧ ಚಟುವಟಿಕೆ ಯುತವಾದ ಕ್ರೀಢೆಗಳನ್ನು ಏರ್ಪಡಿಸಿದ್ದರು. ಅಂದಿನ ಆ ದಿನದ ಎಲ್ಲ ಕಾರ್ಯಕ್ರಮ ಗಳು ಎಂದಿಗೂ ಮರೆಯದೆ, ಅಚ್ಚಳಿಯದೆ ಮನದಾಳದಲ್ಲಿ ನೆಲೆ ನಿಲ್ಲುವಂಥ ರೀತಿಯಲ್ಲಿ ವಿದ್ಯಾರ್ಥಿಗಳು ನಡೆಸಿಕೊಟ್ಟ ಬಗೆಯಂತೂ ಅಮೋಘವಾಗಿತ್ತು.

ವರದಿ: ಶ್ರೀಮತಿ ಚಂಪಕಮಾಲಿನಿ

ಅರವತ್ತನೇ ಸ್ವಾತಂತ್ರದಿನಾಚರಣೆಯನ್ನು ಶ್ರೀಮಠದಲ್ಲಿ ವೈಭವದಿಂದ ಆಚರಿಸಲಾಯಿತು. ದಿವ್ಯ ಸಾನ್ನಿಧ್ಯ ವಹಿಸಿದ್ದ ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳು ಆಶೀರ್ವಚನ ನಿಡುತ್ತಾ, ಭಾರತೀಯರು ಸ್ವಾತಂತ್ರ್ಯ ಪಡೆದು 59 ವರ್ಷಗಳಾಯಿತು. ಭಾರತ ಶ್ರೇಷ್ಠ ಸಂಸ್ಕೃತಿ, ಪರಂಪರೆ ಉಳ್ಳ ರಾಷ್ಟ್ರ, ಭಾರತದಲ್ಲಿ ಪ್ರಥಮ ಬಾರಿಗೆ ನಾಗರಿಕತೆಗೆ ಅನ್ವರ್ಥವಾಗಿ ಬದುಕನ್ನು ನಡೆಸಿದವರು ಚಕ್ರವರ್ತಿಗಳು, ಸಾಮ್ರಾಟರು. ಆಳ್ವಿಕೆ ಮಾಡಿದ ರಾಷ್ಟ್ರ, ಹಲವಾರು ಕಾರಣಗಳಿಂದ ನಾವು ಸ್ವಾತಂತ್ರ್ಯ ಕಳೆದುಕೊಂಡೆವು. ಅದನ್ನು ಪಡೆಯಲು ಸಾವಿರಾರು ಮಂದಿ ಪ್ರಾಣ ತ್ಯಾಗ ಮಾಡಿದರು. ತುರಂಗವಾಸ, ಲಾಟಿ, ಬೂಟಿನೇಟು ತಿಂದರು. ಈ ದೇಶ-ಭಕ್ತರ ಹೋರಾಟದ ಫಲವಾಗಿ ಸ್ವಾತಂತ್ರ್ಯ ಬಂದಿದೆ. ಅದನ್ನು ರಕ್ಷಣೆ ಮಾಡುವ ಜವಾಬ್ದಾರಿ ಜನಗಳಿಗಿಲ್ಲ. ಸ್ವಾತಂತ್ರ್ಯ ಬಂದ ಸನ್ನಿವೇಶದಲ್ಲಿ ಹಿಂದು-ಮುಸ್ಲೀಮರ ಕೋಮುದಳ್ಳುರಿ ಒಂದೆಡೆ, ದಟ್ಟದಾರಿದ್ರ್ಯ ಇನ್ನೊಂದೆಡೆ, ದೇಶ ಕಂಗಾಲಾಗಿತ್ತು. ಜವಾಬ್ದಾರಿ ಜಾಸ್ತಿಯಾಗಿದೆ. ರಾಷ್ಟ್ರ ಚಾರಿತ್ರ್ಯ ತೃಪ್ತಿಕರ ವಾಗಿಲ್ಲ. ಆರ್ಥಿಕವಾಗಿ ಬಲಿಷ್ಟವಾಗಬೇಕು, ಅಸಮಾನತೆ ಹೋಗಬೇಕು, ಮುಖಂಡರಲ್ಲಿ ತ್ಯಾಗ ಮನೋಭಾವ ಇಲ್ಲ. ಈ ಎಲ್ಲಾ ಸಮಸ್ಯೆ ಪರಿಹಾರವಾಗಬೇಕಾದರೆ, ಭಾರತ ತಲೆ ಎತ್ತಿ ನಿಲ್ಲಬೇಕಾದರೆ, ಯುವ ಜನಾಂಗ ಎಚ್ಚೆತ್ತುಕೊಳ್ಳಬೇಕು. ನಮ್ಮಲ್ಲಿ ಬುದ್ಧಿವಂತ ವಿಜ್ಞಾನಿಗಳಿದ್ದಾರೆ, ತಂತ್ರಜ್ಞರಿದ್ದಾರೆ. ಪ್ರಜಾಪ್ರಭುತ್ವ ಯಶಸ್ವಿಯಾಗಬೇಕಾದರೆ ಅವರವರ ಜವಾಬ್ದಾರಿ ಅರಿತು ಬಾಳ್ವೆ ಮಾಡಬೇಕು. ವಿದ್ಯಾರ್ಥಿಗಳಲ್ಲಿ ಭಾರತವನ್ನು ಕಟ್ಟಬೇಕೆಂಬ ಶ್ರದ್ಧೆ, ನಿಷ್ಠೆ, ಛಲ ನಿರಂತರವಾಗಿ ಮುಂದುವರೆಯಬೇಕು. ಈ ದಿಶೆಯಲ್ಲಿ ಭಗವಂತ ಎಲ್ಲರಿಗೂ ಸಮೃದ್ಧಿ ನೀಡಲಿ ಎಂದು ಭಗವಂತನಲ್ಲಿ ಪ್ರಾರ್ಥಿಸೋಣ ಎಂದು ಆಶೀರ್ವಚನ ನೀಡಿದರು.



ಜಿಲ್ಲಾ ಉಸ್ತುವಾರಿ ಸಚಿವರಾದ ಸನ್ಮಾನ್ಯ ಶ್ರೀ ಚೆನ್ನಿಗಪ್ಪನವರು ಧ್ವಜಾರೋಹಣ ಮಾಡಿ ವಂದನೆ ಸ್ವೀಕರಿಸುತ್ತಾ, ವಿದ್ಯಾರ್ಥಿಗಳ ಪಾತ್ರ ಸ್ವತಂತ್ರ ಭಾರತದಲ್ಲಿ ಅನಂತ, ಮಹಾತ್ಮರ ಕನಸು ಸಾರ್ಥಕವಾಗಬೇಕು ಶ್ರೀಮಠ ಅಖಂಡ ಭಾರತದ ಸಂಸ್ಕೃತಿಯನ್ನು ಎತ್ತಿ ಹಿಡಿಯುವಂತಾದದ್ದು ಪೂಜ್ಯರ ಕಾಯಕ ನಿಷ್ಠೆ, ಕಾರುಣ್ಯ ಅನ್ಯಾದೃಶ ಎಂದು ಆಶಿಸಿದರು. ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಜಿಲ್ಲಾಧಿಕಾರಿಗಳಾದ ಶ್ರೀ ಉಮಾಶಂಕರ್‌ರವರು ಮಾತನಾಡುತ್ತಾ, ಭಾರತ ಸ್ವಾಂತ್ರ್ಯ ಪೂರ್ವದಲ್ಲಿ ಅನೇಕ ಸಮಸ್ಯೆಗಳನ್ನು ಎದುರಿಸುತ್ತಿತ್ತು. 1942ರಿಂದ 45ರ ಮಧ್ಯೆ ರೋಗರುಜಿನ, ಬಡತನ, ಕ್ಷಾಮ ಡಾಮರಗಳಿಂದ ನಾಲ್ಕೈದು ಕೋಟಿ ಸಾವನ್ನಪ್ಪಿದರು. ಒಂದು ಕೈಗಾರಿಕೆಗಳಾಗಲಿ, ಇರಲಿಲ್ಲ, ಶಾಲಾ ಕಾಲೇಜುಗಳು ಅತ್ಯಲ್ಪ, ಬೇರೆ ರಾಷ್ಟ್ರಗಳಿಂದ ಆಹಾರ ತರಿಸಿಕೊಳ್ಳಬೇಕಾದ ಪರಿಸ್ಥಿತಿ. ಮೂವತ್ತು ಕೋಟಿ ಜನರನ್ನು ಸಾಕುವುದಕ್ಕೆ ಸಾಧ್ಯವಿರಲಿಲ್ಲ. ಆದರೆ ಇಂದು 105 ಕೋಟಿ ಜನಗಳ ಸಮಸ್ಯೆಗಳನ್ನು ಪರಿಹಾರ ಮಾಡಬಹುದಾಗಿದೆ. ನಾನು ಪೂಜ್ಯರನ್ನು ಧಾರ್ಮಿಕ ಗುರು ಅನ್ನುವುದಕ್ಕಿಂತ, ರಾಷ್ಟ್ರಭಕ್ತಿಯನ್ನು ಮಕ್ಕಳಲ್ಲಿ ಬೆಳೆಸುವ ದೇಶಭಕ್ತಿಯನ್ನು ಕಾಣುತ್ತೇನೆ. ಕ್ರಿ.ಪೂ. ಆರನೇ ಶತಮಾನದಲ್ಲಿಯ ಜೈನ, ಬೌದ್ಧ ಧರ್ಮಗಳು ಜಗತ್ತಿಗೆ ಬೆಳಕನ್ನು ನೀಡಿವೆ. ಇಂದು ಐ.ಟಿ. ಬಿ.ಟಿ. ಕ್ಷೇತ್ರದಲ್ಲಿ ಹಾಗೂ ಎಲ್ಲಾ ರಂಗದಲ್ಲಿ ಮೇಧಾವಿಗಳಿದ್ದಾರೆ ಎಂಬುದನ್ನು ಇಂದು ಜಗತ್ತು ಒಪ್ಪಿಕೊಳ್ಳುತ್ತಿದೆ. ಭಾರತಕ್ಕೆ ಯಾವುದೇ ಪ್ರತಿಸ್ಪರ್ಧಿ ಇಲ್ಲದಂತೆ ರಾಷ್ಟ್ರ ನಿರ್ಮಾಣದಲ್ಲಿ ಕಂಕಣಬದ್ಧರಾಗಿ ಪೂಜ್ಯರ ಆಶೋತ್ತರಗಳನ್ನು ಈಡೇರಿಸೋಣ ಎಂದು ಆಶಿಸಿದರು.

ತುಮಕೂರು ಜಿಲ್ಲಾ ಸಿ.ಇ.ಒ. ಉಪಸ್ಥಿತರಿದ್ದರು. ಕಿರಿಯ ಶ್ರೀಗಳ ಸಾನ್ನಿಧ್ಯದಲ್ಲಿ ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆದವು.

## ಗಣೇಶೋತ್ಸವದ ವರದಿ

ದಿನಾಂಕ 27-08-2006ರಂದು ಬೆಳಿಗ್ಗೆ ಶ್ರೀ ವಿದ್ಯಾಗಣಪತಿಯನ್ನು ಪ್ರತಿಷ್ಠಾಪಿಸಿ ಅಂದು ಸಂಜೆ 6 ಗಂಟೆಗೆ ಪ್ರಾರ್ಥನಾ ಸಭಾಂಗಣದಲ್ಲಿ 'ಸ್ಯಮಂತಕೋಪಾಖ್ಯಾನ' ವನ್ನು ಸಂಸ್ಕೃತ ಕಾಲೇಜಿನ ಉಪನ್ಯಾಸಕರಾದ ಶ್ರೀ ಡಿ.ಎಸ್.ಚಂದ್ರಶೇಖರಯ್ಯನವರು ನಡೆಸಿಕೊಟ್ಟರು. ದಿವ್ಯಸಾನ್ನಿಧ್ಯ ವಹಿಸಿದ್ದ ಕಿರಿಯ ಶ್ರೀಗಳಾದ ಶ್ರೀ ಸಿದ್ದಲಿಂಗಮಹಾಸ್ವಾಮಿಗಳು ಆಶೀರ್ವಚನ ನೀಡುತ್ತಾ, ಭಾರತೀಯ ಮೌಲ್ಯಗಳ ಉಳಿವಿಕೆಗೆ ಹಬ್ಬಗಳು ಮಹತ್ವದ ಪಾತ್ರ ವಹಿಸಿವೆ. ಭಗವಂತ ಇದ್ದಾನೆ ಎಂಬ ನಂಬಿಕೆ ಬೇಕು. ಭಗವಂತನ ತೇಜಸ್ಸಿನಿಂದ ಇವೆಲ್ಲಾ ಬೆಳಗುತ್ತಿವೆ. ಭಗವಂತ ಒಬ್ಬನೇ, 'ಏಕಂ ಸತ್ ವಿಪ್ರಾಬಹುಧಾ ವದಂತಿ' ಎಂಬುದು ಆರ್ಯೋಕ್ತಿ. 'ಅವರವರ ದರುಶನಕೆ ಅವರವರ ವೇಶದಲ್ಲಿ ಅವರವರಿಗೆಲ್ಲಾ ದೇವನೀನೊಬ್ಬನೆ' ಎಂಬ ಉಕ್ತಿಯಂತೆ ಏಕದೇವ ಸ್ಮರಣೆ ಮಾಡಬೇಕು. ನಮ್ಮ ಗ್ರಾಮೀಣ ಜನ ಬೆಳಗಾಗಿ ಎದ್ದು ಎಳ್ಳು ಜೀರಿಗೆ ಬೆಳೆಯಳ ಭೂತಾಯ ಒಂದು ಗಳಿಗೆ ನೆನೆದು ಕೃತಜ್ಞತೆ ಅರ್ಪಿಸುತ್ತಾರೆ. ಭಗವಂತ ಪಂಚಭೂತಗಳನ್ನು ನಮಗಾಗಿ ಸೃಷ್ಠಿ ಮಾಡಿದ್ದಾನೆ. ಆದರೆ ನಮಗೆ ಎಡರು ಬಂದಾಗ ಮಾತ್ರ ಸ್ಮರಣೆ ಮಾಡುತ್ತೇವೆ. ನಮಗೆ ಪರಿಸರ ಸ್ನೇಹಿ ಗಣಪ ಬೇಕು ಸ್ವಾತಂತ್ರ್ಯ ಹೋರಾಟದಲ್ಲಿ ಅಪ್ರತಿಮ ಪಾತ್ರ ವಹಿಸಿದವನು. ಶುದ್ಧವಾದ ಮನಸ್ಸು, ಭಕ್ತಿ ಇರಬೇಕು. ಭಗವಂತ ನಮ್ಮ ಭಾವನೆಗಳಲ್ಲಿದ್ದಾನೆ ಎಂದು ಸ್ವಾಮಿ ವಿವೇಕಾನಂದರು ಹೇಳಿದ್ದಾರೆ ಗಣಪ ತಾಯಿ-ತಂದೆಗಳೇ ದೇವರೆಂದು ಲೋಕಕ್ಕೆ ತಿಳಿಸಿದವ ಎಂದು ಆಶೀರ್ವಚನದಲ್ಲಿ ತಿಳಿಸಿದರು.

ಮೂರು ದಿನಗಳ ಕಾಲ ಸಂಗೀತ, ವಚನ ಗಾಯನ ಕಾರ್ಯಕ್ರಮಗಳನ್ನು ಏರ್ಪಡಿಸಲಾಗಿತ್ತು.

ದಿನಾಂಕ 31-08-2006 ರಂದು ಗಣಪತಿಯ ವಿಸರ್ಜನಾ ಕಾರ್ಯಕ್ರಮದ ಅಂಗವಾಗಿ ನಡೆದ ಕಾರ್ಯಕ್ರಮದಲ್ಲಿ ಶ್ರೀಮಠದ ಹಳೆಯ ವಿದ್ಯಾರ್ಥಿಗಳು ಎಸ್.ಐ.ಟಿ. ಯು ಪ್ರಾಚಾರ್ಯರೂ ಆದ ಶ್ರೀ ಎಂ.ಎನ್. ಚನ್ನಬಸಪ್ಪನವರು ಶ್ರೀಮಠದ ತಮ್ಮ ಬಾಲ್ಯದ ದಿನಗಳನ್ನು ಸ್ಮರಣೆ ಮಾಡಿಕೊಂಡರು. ಪೂಜ್ಯರ ಕಾಯಕ ಫಲದಿಂದ ಸಂಸ್ಥೆ ಉದಿತೋದಿತವಾಗಿ ಬೆಳೆದಿದೆ ಎಂದು ತಿಳಿಸಿದರು.

ದಿವ್ಯಸಾನ್ನಿಧ್ಯ ವಹಿಸಿದ್ದ ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳು ಆಶೀರ್ವಚನ ನೀಡುತ್ತಾ, ಈ ಗಣೇಶೋತ್ಸವ ಮಹಾರಾಷ್ಟ್ರದಲ್ಲಿ ಪ್ರಾರಂಭವಾಯಿತು. ಆಂಗ್ಲರ ಕಾಲದಲ್ಲಿ ಪ್ರಭು ಮತ್ತು ಸೇವಕರೆಂಬ ವಾತಾವರಣವಿತ್ತು. ನಾವು ನಮ್ಮ ಸ್ವಾತಂತ್ರ್ಯ ಪಡೆದುಕೊಳ್ಳಲು ಹೋರಾಟ ಮಾಡಬೇಕಾಯಿತು. ಈ ಗಣೇಶೋತ್ಸವ ಜನ ಸಂಘಟನೆಗೆ ಕಾರಣವಾಯಿತು. ಆದರೆ ಇಂದು ಆಡಂಬರದ ಉತ್ಸವವಾಗಿ ಅದರ ಪಾವಿತ್ರ್ಯತೆಯನ್ನು ಕಳೆದುಕೊಳ್ಳುತ್ತಿದೆ. ಗಣೇಶನನ್ನು ಎಲ್ಲಾ ಜಾತಿ, ಮತ ಭೇದವೆನ್ನದೆ ಆಚರಿಸುತ್ತಾರೆ. ವಿಷ್ಣುವಾಗಲೀ, ಶಿವನಾಗಲೀ ಯುದ್ಧಕ್ಕೆ ಹೊರಟಾಗ ಈ ಗಣಪತಿಯ ಪೂಜೆ ಮಾಡಿ ಹೋಗುತ್ತಾರೆ ಎಂಬುದನ್ನು ಪುರಾಣಗಳು ಹೇಳುತ್ತಿವೆ. ವಿದ್ಯಾರ್ಥಿಗಳಾದ ನೀವು ಎಲ್ಲವನ್ನೂ ದೇವರ ಮೇಲೆ ಭಾರ ಹಾಕಿ ಕೈಕಟ್ಟಿ ಕುಳಿತುಕೊಳ್ಳಬಾರದು, ನಿಮ್ಮ ಅಭ್ಯಾಸವನ್ನು ಚೆನ್ನಾಗಿ ಮಾಡಬೇಕು ಎಂದು ಆಶೀರ್ವದಿಸಿದರು.

## ಶಿಕ್ಷಕರ ದಿನಾಚರಣೆ




ಸೆಪ್ಟೆಂಬರ್ 5ರಂದು ಶ್ರೀಮಠದಲ್ಲಿ ಶಿಕ್ಷಕ ದಿನಾಚರಣೆಯನ್ನು ಏರ್ಪಡಿಸಲಾಗಿತ್ತು. ಪ್ರಸ್ತುತ ಸಾಲಿನಲ್ಲಿ ನಲವತ್ತೊಂದು ಜನ ಭೋದಕ-ಭೋದಕೇತರ ನೌಕರರು ನಮ್ಮ ಸಂಸ್ಥೆಯ ವತಿಯಿಂದ ನಿವೃತ್ತಿಯನ್ನು ಹೊಂದಿದ್ದರು. ಕಿರಿಯ ಶ್ರೀಗಳು ಅವರಿಗೆಲ್ಲ ಶಾಲು ಹೊದಿಸಿ ಸನ್ಮಾನಿಸಿ, ಆಶೀರ್ವಚನ ನೀಡುತ್ತಾ, ಈ ದೇಶದಲ್ಲಿ ಅನೇಕ ದಿನಾಚರಣೆ ಗಳನ್ನು ಆಚರಿಸುತ್ತೇವೆ. ಅವುಗಳಲ್ಲಿ ಮಕ್ಕಳ ದಿನಾಚರಣೆ, ಶಿಕ್ಷಕರ ದಿನಾಚರಣೆಗಳು ಮಹತ್ವವಾದವುಗಳು. ಶ್ರೀ ರಾಧಾ ಕೃಷ್ಣನ್‌ರವರು ಈ ದೇಶದಲ್ಲಿ ಅನೇಕ ಹುದ್ದೆಗಳನ್ನು ಅಲಂಕರಿಸಿದ್ದರು. ಶಿಕ್ಷಕ ವೃತ್ತಿಯ ಬಗ್ಗೆ ಅತೀವ ಒಲವನ್ನು ತಾಳಿದ್ದವರು. ಇದರಿಂದ ಶಿಕ್ಷಕರು ದೇಶದ ಭವಿಷ್ಯವನ್ನು ರೂಪಿಸುವ ರುವಾರಿಗಳು. ನಾವು ನಮ್ಮ ಮಕ್ಕಳಿಗೆ ಎಂತಹ ಶಿಕ್ಷಣ ನಿಡುತ್ತೇವೆಯೊ ಅಂತಹ ಸಂಸ್ಕೃತಿ ಬೆಳೆಯುತ್ತದೆ. ಇಂದು ಗುರುಶಿಷ್ಯರ ಸಂಬಂಧ ಶಿಥಿಲವಾಗುತ್ತಿದೆ. ಗುರುವೇನು ಮಹಾ ಎನ್ನುವ ಭಾವ. ಶಿಕ್ಷಕರು ಮಕ್ಕಳಿಗೆ ಭೋಧಿಸಬೇಕಾದರೆ ತಾಯಿಯ ವಾತ್ಸಲ್ಯದಂತೆ ಕಾಣಬೇಕು 'ನಹಿ ಜ್ಞಾನೇನ ಸದೃಶಂ' ಎಂಬ ಆರ್ಯೋಕ್ತಿಯನ್ನು ಮನವರಿಕೆ ಮಾಡಿಕೊಡಬೇಕು ಎಂದು ಆಶೀರ್ವದಿಸಿದರು.

ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಪ್ರಜಾವಾಣಿ ದಿನಪತ್ರಿಕೆಯ ಸಹಾಯಕ ಸಂಪಾದಕರಾದ ಶ್ರೀ ಡಿ.ವಿ. ರಾಜಶೇಖರ್‌ರವರು ಮಾತನಾಡಿ ಶ್ರೀ ಸಿದ್ಧಗಂಗಾ ಮಠ ಗುರುಕುಲ ಪರಂಪರೆಯನ್ನು ಬೆಳೆಸಿಕೊಂಡು ಬಂದಿದೆ. ಸಿದ್ಧಗಂಗಾ ಸಂಸ್ಥೆ ಪರಮಪೂಜ್ಯರಿಂದ ಬೆಳಗುತ್ತಿದೆ. ಅವರು ಗ್ರಾಮಾಂತರ ಪ್ರದೇಶಗಳಲ್ಲಿ ಶಾಲೆಗಳನ್ನು ಪ್ರಾರಂಭಿಸದಿದ್ದರೆ ನಾನು ನಿರ್ಗತಿಕನಾಗಬೇಕಿತ್ತು. ಇಂದು ಉದ್ಯೋಗ ಹಣಗಳಿಸುವ ಕಡೆ ವಾಲುತ್ತಿದೆ. ಬಡವ ಬಡವನಾಗುತ್ತಿದ್ದಾನೆ. ಶ್ರೀಮಂತ ಶ್ರೀಮಂತನಾಗುತ್ತಿದ್ದಾನೆ. ಭ್ರಷ್ಟಾಚಾರಿಗಳ

ಕೈಮೇಲಾಗಿದೆ. ಮುಕ್ತ ಮಾರುಕಟ್ಟೆಯಿಂದ ರೈತರ ಸ್ಥಿತಿ ಚಿಂತಾಜನಕವಾಗಿದೆ. ಜಾಗತೀಕರಣದಿಂದ ಜಗತ್ತೆಲ್ಲ ಬದಲಾಗುತ್ತಿದೆ. ಇದಕ್ಕೆ ಅನುಗುಣವಾಗಿ ಶಿಕ್ಷಕರು ಪ್ರತಿಭಾವಂತ ಶಿಕ್ಷಣ ನೀಡಬೇಕು. ಇಂದು ಹಣ ಉಳ್ಳವರು ಮಾತ್ರ ವಿದ್ಯೆ ಕಲಿಯುತ್ತಿದ್ದಾರೆ. ವಿದ್ಯಾರ್ಥಿಗಳಿಗೆ ಇಚ್ಛಾಶಕ್ತಿ, ನಿಮ್ಮ ಗುರಿ ನಿಚ್ಚಳವಾಗಬೇಕು. ಉದ್ಯೋಗಕ್ಕಾಗಿ ನೂರಾರು ದಾರಿಗಳಿವೆ. ಶಿಕ್ಷಕರು ವಿದ್ಯಾರ್ಥಿಗಳಲ್ಲಿರುವ ಪ್ರತಿಭೆಯನ್ನು ಗುರುತಿಸಿ ಆ ದಿಸೆಯಲ್ಲಿ ಮಾರ್ಗ ದರ್ಶನ ಮಾಡಬೇಕು. ಕನ್ನಡ ಭಾಷೆಯ ಜೊತೆಗೆ ಇಂಗ್ಲೀಷ್ ಅನ್ನು ಚೆನ್ನಾಗಿ ಕಲಿಯಿರಿ. ಭಾರತ ಭ್ರಷ್ಟಾಚಾರದಿಂದ ಪ್ರಜಾಪ್ರಭುತ್ವದ ಬೇರುಗಳು ಅಲುಗಾಡುವಂತಾಗಿವೆ. ಶಿಕ್ಷಕರು ಈ ಎಲ್ಲಾ ವಿಚಾರಗಳನ್ನು ಮಕ್ಕಳಿಗೆ ಮಾರ್ಗದರ್ಶನ ಮಾಡಿ ಅವರನ್ನು ಉತ್ತಮ ನಾಗರಿಕರನ್ನಾಗಿ ರೂಪಿಸಬೇಕು ಎಂದು ಆಶಿಸಿದರು.

ಮತ್ತೋರ್ವ ಅತಿಥಿಗಳಾಗಿ ಆಗಮಿಸಿದ್ದ ವಿಧಾನ ಪರಿಷತ್ ಸದಸ್ಯರಾದ ಶ್ರೀ ನಾರಾಯಣ ಸ್ವಾಮಿಯವರು ಮಾತನಾಡಿ, ಶಿಕ್ಷಕರಿಗೆ ಮಕ್ಕಳೇ ಆಸ್ತಿ, ಶಿಕ್ಷಕರು ಈ ದಿನ ಮಾತ್ರ ರಾಧಾಕೃಷ್ಣನ್‌ರವರನ್ನು ನೆನೆಯದೆ, ಪ್ರತಿನಿತ್ಯ ಅವರ ಆದರ್ಶ ಗುಣಗಳನ್ನು ಅಳವಡಿಸಿಕೊಳ್ಳಬೇಕು. ಸರ್ಕಾರ ಶಿಕ್ಷಕರ ಕುಂದು ಕೊರತೆಗಳ ಬಗ್ಗೆ ಗಮನ ಹರಿಸಿ ಐದನೇ ವೇತನ ಆಯೋಗದಲ್ಲಿ ಅವರಿಗಾಗಿರುವ ವೇತನ ತಾರತಮ್ಯವನ್ನು ನಿವಾರಿಸಬೇಕು ಎಂದು ಕರೆ ನೀಡಿದರು.

ಅಧ್ಯಕ್ಷೀಯ ಭಾಷಣ ಮಾಡಿದ ಪಂಚಾಯತ್‌ರಾಜ್ ಸಚಿವರಾದ ಶ್ರೀ ಸಿ.ಎಮ್. ಉದಾಸಿಯವರು ಮಾತನಾಡಿ ರಾಷ್ಟ್ರಕ್ಕೆ ಮಾದರಿಯಾದದ್ದು ಈ ವಿದ್ಯಾ ಸಂಸ್ಥೆ. ಇಲ್ಲಿ ಈ ಶಿಕ್ಷಕರ ದಿನಾಚರಣೆ ನಡೆಯುತ್ತಿರುವುದು ಅತ್ಯಂತ ಸಂತೋಷ. ದಿನ ಕಳೆದಂತೆ ಶಿಕ್ಷಕರ ವಿದ್ಯಾರ್ಥಿಗಳ ಗುಣಮಟ್ಟ ಕಡಿಮೆಯಾಗುತ್ತಿದೆ. ವಿಕಾಸಕ್ಕೆ ಬೇಕಾಗಿರುವುದು ವಿದ್ಯೆ. ಮೊದಲ ಪಂಚವಾರ್ಷಿಕ ಯೋಜನೆಯಲ್ಲಿ ವಿದ್ಯಾಭ್ಯಾಸಕ್ಕೆ ಹೆಚ್ಚು ಒತ್ತು ಕೊಟ್ಟಿದ್ದರೆ ಇಂದು ನಾವು(ಭಾರತಿಯರು) ಜಗತ್ತನ್ನೇ ಆಳುತ್ತಿದ್ದ, ಅಮೇರಿಕಾದಲ್ಲಿ ವಾಸವಾಗಿರುವ ಜನಗಳಲ್ಲಿ ಭಾರತೀಯರು ವಿದ್ಯಾವಂತ ವಿನಯಶೀಲರು ಎಂದು ಮನ್ನಣೆಗಳಿಸಿದ್ದಾರೆ. ಶಿಕ್ಷಕರ ಬುದ್ದಿ ಮತ್ತೆ ಗೋಚರವಾಗುವುದು ಪರೀಕ್ಷೆ ಫಲಿತಾಂಶ ಪ್ರಕಟವಾದಾಗ. ಶಿಕ್ಷಕರು ಹೆಚ್ಚು ಹೆಚ್ಚು ಅಧ್ಯಯನಶೀಲರಾಗಿ ಉತ್ತಮ ಜನಾಂಗವನ್ನು ರೂಪಿಸಬೇಕೆಂದರು.

ದಿವ್ಯಸಾನ್ನಿಧ್ಯ ವಹಿಸಿದ್ದ ಪರಮಪೂಜ್ಯ ಗುರುದೇವರು ಆಶೀರ್ವಚನ ನೀಡುತ್ತಾ, ರಾಧಾಕೃಷ್ಣನ್‌ರವರು ಭಾರತೀಯ ಸಂಸ್ಕೃತಿಯ ಸಾಕಾರಮೂರ್ತಿಗಳಾಗಿದ್ದವರು. ಸ್ಮೈಲ್ ಎಂಬ ತತ್ವಜ್ಞಾನಿ ಹೇಳುವಂತೆ 'ಒಂದು ದೇಶದ ಪ್ರಗತಿ ಆ ದೇಶದ ಭವನಗಳಿಂದಲ್ಲ, ಶಾಲಾ ಕಟ್ಟಡಗಳಿಂದಲ್ಲ, ಶ್ರೀಮಂತಿಕೆಯಿಂದಲ್ಲ, ಆ ದೇಶದ ಜನ ಎಷ್ಟು ಸುಸಂಸ್ಕೃತ ರಾಗಿದ್ದಾರೆ ಎಂಬುದರಿಂದ ಕೂಡಿದೆ' ಅಂತಹ ಸುಸಂಸ್ಕೃತ ಜನಾಂಗವನ್ನು ರೂಪಿಸುವ ಜವಾಬ್ದಾರಿ ಶಿಕ್ಷಕರ ಮೇಲಿದೆ. ಶಿಕ್ಷಕರಿಗೆ ಈ ದೇಶದಲ್ಲಿ ಮೇಲ್ಮಟ್ಟದ ಸ್ಥಾನವಿದೆ. 'ಆಚಾರ್ಯ ದೇವೋಭವ' ಎಂದು ಕರೆದರು. ಆಚಾರ್ಯನು ತ್ಯಾಗ, ಸರಳತೆ, ಸೇವಾ ಜೀವನದ ಪ್ರತೀಕ. ಟಾಗೋರರು ಹೇಳುವಂತೆ ಶಿಕ್ಷಕ, ಸ್ನೇಹಿತನಾಗಿ, ಮಾರ್ಗದರ್ಶನಕನಾಗಿ, ತತ್ವಜ್ಞಾನಿಯಾಗಿರಬೇಕು. ತನ್ನ ಸ್ಥಾನ, ಕರ್ತವ್ಯ ಅರಿತು ಬಾಳಬೇಕು. ಶಿಕ್ಷಣ ಇಲಾಖೆ ಶಿಕ್ಷಕರ ಕುಂದುಕೊರತೆಗಳ ಬಗ್ಗೆ ಗಮನ ಕೊಡಬೇಕು ಎಂದು ಆಶೀರ್ವಚನ ನೀಡಿದರು.

ವರದಿ : ಶ್ರೀ ಡಿ.ಎಸ್. ನಾಗರಾಜು

### ಇಷ್ಟಲಿಂಗ ನಿಷ್ಠೆ ಬೇಕು

ಯಾವ ವ್ರತ ನಿಯಮಗಳಾದರೇನು?
ಯೋಗಿಗಳಾದರೇನು? ಹೋಮ-
ನೇಮಗಳಾದರೇನು? ಜಪ-ತಪಗಳಾದರೇನು?
ಮಂತ್ರ-ತಂತ್ರಗಳಾದರೇನು?
ತನ್ನಿಷ್ಟಲಿಂಗದ ಮರ್ಮವನರಿಯದನಕ್ಕ ?
ಚಿತ್ತರಗಿ ಕರ್ತೃ ಶಿವಯೋಗೀಶ ಶ್ರೀ ವಿಜಯ
ಮಹಾಂತೇಶ, ನಿನ್ನ ಏಕನಿಷ್ಠೆ ಇರಲಾರದ
ನಿಯಮಾದಿಗಳೆಲ್ಲವೂ ಲಿಂಗವಂತರಿಗೆ
ಅನಿಷ್ಟಕಾರಕವು ನೋಡಯ್ಯಾ.

### ಬಸವಾಕ್ಷರ ತ್ರಯ ಭವಹಾರಕ

ಬಸವ ಬಸವ ಎಂದರೆ ಭವರೋಗ ಕಳೆವುದು
ನೋಡಾ;
ಬಸವ ಬಸವ ಎಂದರೆ ಸಂಕಷ್ಟ ಪರಿಹರಿಪುದು
ನೋಡಾ;
ಬಸವ ಬಸವ ಎಂದರೆ ಒಲಿವುದು
ಮಹಾಪ್ರಸಾದ ನೋಡಾ
ಇಂತೀ ಬಸವ ಎಂಬ ಮೂರಕ್ಷರಂಗಳಲ್ಲಿರ್ಪ
ಕಾಮಧೇನು, ಕಲ್ಪವೃಕ್ಷ, ಕರುಣಾಮೃತದಂತಹ,
ಕ್ಷೀರ-ಫಲ-ಮಾಧುರ್ಯ ಸವಿಯಬೇಕೆಂಬಾತನು
ಸದಾ ನಾಮವ ಜಪಿಸಬೇಕು ನೋಡಾ.
ಚಿತ್ತರಗಿ ಕರ್ತೃ ಶಿವಯೋಗೀಶ ಶ್ರೀ ವಿಜಯ
ಮಹಾಂತೇಶ

- ಮನೋಹರ ಮೈದರಗಿ





## ಶ್ರೀ ಸಿದ್ಧಗಂಗಾ ಮಠದ ದಾಸೋಹ ನಿಧಿ

## ಅನ್ನದಾನಕ್ಕೊಂದು ಅಪೂರ್ವ ಅವಕಾಶ

'ಅನ್ನಾದ್ಭವಂತಿ ಭೂತಾನಿ ಅಂದರೆ ಅನ್ನದಿಂದಲೇ ಸಕಲ ಜೀವಿಗಳ ಉತ್ಪತ್ತಿ.'
'ಅನ್ನದಾನಕ್ಕಿಂತ ಇನ್ನು ದಾನವಿಲ್ಲ'

ಶ್ರೀಮಠದಲ್ಲಿ ಕರ್ನಾಟಕ, ಆಂಧ್ರಪ್ರದೇಶ, ಮಹಾರಾಷ್ಟ್ರ, ತಮಿಳುನಾಡು ಪ್ರಾಂತ್ಯಗಳಿಂದ ಅಧ್ಯಯನಕ್ಕೆ ಮಕ್ಕಳು /ವಿದ್ಯಾರ್ಥಿಗಳ ಸಂಖ್ಯೆ 8000 ಮುಟ್ಟಿದೆ. ಇಲ್ಲಿ ಜಾತಿ ಭೇದವಿಲ್ಲ. ಪ್ರತಿದಿನ ಮಕ್ಕಳ ಪೋಷಕರು, ಪ್ರವಾಸಿಗರು ಶ್ರೀಕ್ಷೇತ್ರದ ಭಕ್ತರು ಸಹಸ್ರಾರು ಮಂದಿ ಆಗಮಿಸುತ್ತಾರೆ. ಎಲ್ಲರಿಗೂ ದಾಸೋಹ ನಡೆಯಬೇಕು. ಸ್ವಂತ ಆಸ್ತಿ ಬೆಂಬಲವಿಲ್ಲ. ಶ್ರೀ ಶ್ರೀಗಳವರ ಆತ್ಮಬಲ ಮತ್ತು ಭಕ್ತರ ಬೆಂಬಲದ ಮೇಲೆ ಈ ಕಾರ್ಯ ನಡೆಯುತ್ತಿದೆ. ಈ ದಾಸೋಹ ಸೇವೆಯಲ್ಲಿ ಪಾಲ್ಗೊಳ್ಳುವ ಅಪೂರ್ವ ಅವಕಾಶವನ್ನು ಶ್ರೀಗಳವರು ಅನುಗ್ರಹಿಸಿದ್ದಾರೆ.

ಈ ಯೋಜನೆಯಂತೆ ಮಹನೀಯರು ಕೊನೆಯ ಪಕ್ಷ ರೂ. 2000/- ಕಡಿಮೆಯಿಲ್ಲದಂತೆ ಶ್ರೀಮಠದ ದಾಸೋಹನಿಧಿಗೆ ಅರ್ಪಿಸಬೇಕು. ಇದನ್ನು ಶಾಶ್ವತ ನಿಧಿಯನ್ನಾಗಿ ಇಟ್ಟು (ಎಫ್.ಡಿ.) ಅದರ ಬಡ್ಡಿ ಹಣವನ್ನು ದಾಸೋಹಕ್ಕೆ ಬಳಸಲಾಗುವುದು.

**No.: DIT/E/80G** ಪ್ರಕಾರ ಆದಾಯ ತೆರಿಗೆ ವಿನಾಯಿತಿ ಇದೆ.

ಶ್ರೀಮಠದ ಭಕ್ತಮಂಡಳಿ ಪರವಾಗಿ

ಈ ಪುಣ್ಯಕಾರ್ಯಫಲದ ಶ್ರೀ ಸಿದ್ಧಗಂಗಾ ಮಠದ ದಾಸೋಹ ನಿಧಿಗೆ ಅರ್ಪಿಸಿರುವವರ ವಿಳಾಸ
(ಮುಂದುವರೆದುದು)

| ಕ್ರಸಂ. | ಹೆಸರು ಮತ್ತು ವಿಳಾಸ | ಮೊತ್ತ | ಕ್ರಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|---|---|---|
| 3658. | ಡಾ॥ ಸಿ.ಸದಾಶಿವಯ್ಯ, ಸಹ-ಪ್ರಾಧ್ಯಾಪಕರು ಸಿವಿಲ್ ಇಂ. ವಿಭಾಗ, ಎಸ್.ಐ.ಟಿ. ತುಮಕೂರು. | 5000.00 | 3670. | ಶ್ರೀ ಪಿ.ಎಸ್. ಪುಟ್ಟಶಂಕರಯ್ಯ, ಆಡಳಿತಾಧಿಕಾರಿಗಳು, ಶ್ರೀ ಸಿದ್ಧಗಂಗಾ ಮಠ, ತುಮಕೂರು. | 5770.00 |
| 3659. | ಶ್ರೀ ಗಂಗಾಧರಯ್ಯ, 'ಡಿ' ಗ್ರೂಫ್ ನೌಕರರು ಶ್ರೀ ಶಾ.ಪ್ರೌ.ಶಾಲೆ, ತಂಡಗ, ತುರುವೇಕೆರೆ ತಾ. | 2000.00 | 3671. | ಶ್ರೀ ಎಂ. ಮಾರೇಗುಡ್ಡೆ, ಸಹಾಯಕ ಅಧೀಕ್ಷಕರು, ಪೋಸ್ಟ್ ಆಫೀಸ್, ತುಮಕೂರು. | 2001.00 |
| 3660. | ಶ್ರೀ ಕೆ. ಕೃಷ್ಣಯ್ಯ ದೈ.ಶಿ. ಶಿಕ್ಷಕರು, ಶ್ರೀ ರಂ.ಗ್ರಾ.ಪ್ರೌ.ಶಾಲೆ, ನೇರಳೇಕೆರೆ, ಮಧುಗಿರಿ ತಾ., | 2000.00 | 3672. | ಶ್ರೀಮತಿ ಪಾರ್ವತಮ್ಮ ಗುರುಬಸವದೇವರು, ಬಸವೇಶ್ವರ ಬಡಾವಣೆ, ಕ್ಯಾತ್ಸಂದ್ರ | 25,000.00 |
| 3661. | ಶ್ರೀ ಮಹದೇವ, ಸರ್.ಎಂ.ವಿ. ನಗರ, ಕೊಪ್ಪಗಲ್ ರಸ್ತೆ, ಬಳ್ಳಾರಿ. | 2001.00 | 3673. | ಶ್ರೀ ಶಂಭುಲಿಂಗಪ್ಪ, 'ಡಿ' ಗ್ರೂಫ್ ನೌಕರರು, ಶ್ರೀ ಬ.ಶಿ.ತ. ಸಂಸ್ಥೆ, ಶ್ರೀ ಸಿದ್ಧಗಂಗಾ ಮಠ. | 1000.00 |
| 3662. | ಶ್ರೀ ಕೆ.ಎಸ್. ರವಿಶಂಕರ್ ಮತ್ತು ಕುಟುಂಬವರ್ಗ ಆರ್.ಪಿ.ಸಿ. ಲೇಔಟ್, ವಿಜಯನಗರ, ಬೆಂಗಳೂರು. | 40,001.00 | 3674. | ಶ್ರೀಮತಿ ತಾಯಿಮುದ್ದಮ್ಮ ಕೋಂ. ಮಣೂರಪ್ಪ, ಇರಕಸಂದ್ರ ಕಾಲೋನಿ, ಕೊರಟಗೆರೆ ತಾ., | 1001.00 |
| 3663. | ಶ್ರೀ ಬಿ.ಎಸ್. ಸಿಂಗರಾಜ್, ಕದಿರೇನಹಳ್ಳಿ, ಬನಶಂಕರಿ 2ನೇ ಹಂತ, ಬೆಂಗಳೂರು. | 2000.00 | 3675. | ಶ್ರೀ ಜಿ.ಎಸ್. ಬಸವರಾಜು, ಸಂಸ್ಥಾಪಕರು, ಲಿಂಗಾಯಿಯ ಧರ್ಮ, ಜೆ.ಸಿ. ನಗರ, ಬೆಂಗಳೂರು. | 5000.00 |
| 3664. | ಶ್ರೀಮತಿ ವೈ.ಎಂ. ಮಹದೇವಮ್ಮ, ಪ್ರೊಪ್ರೈಟರ್, ಶ್ರೀ ನಂಜುಂಡೇಶ್ವರ ಸಾ ಮತ್ತು ರೈಸ್ ಮಿಲ್, ಕಾಲೇಜು ರಸ್ತೆ, ಟಿ. ನರಸೀಪುರ, ಮೈಸೂರು ಜಿ. | 2100.00 | 3676. | ಶ್ರೀ ಆರ್. ಮಂಜುನಾಥ್, ಗೋಕುಲ ಅಂಚೆ, ಮುತ್ಯಮ್ಮನಗರ, ಬೆಂಗಳೂರು. | 50,000.00 |
| 3665. | ಶ್ರೀ ಡಿ.ಎಸ್. ರಾಜೇಂದ್ರಪ್ರಸಾದ್, ಹಿರಿಯ ಉಪನ್ಯಾಸಕರು, ಸಿವಿಲ್ ಇಂ. ವಿಭಾಗ, ಎಸ್.ಐ.ಟಿ. ತುಮಕೂರು. | 8500.00 | 3677. | ಶ್ರೀ ಕೆ.ಎಂ. ಮಲ್ಲೇಶ್, ಉಪನ್ಯಾಸಕರು, ಸಿವಿಲ್ ಇಂ.ವಿಭಾಗ, ಎಸ್.ಐ.ಟಿ. ತುಮಕೂರು. | 5000.00 |
| 3666. | ಶ್ರೀ ಕೆ.ಆರ್. ಶರ್ಮ, ಗುರು ಆಗ್ರೊ ಇನ್‌ಪುಟ್ಸ್ ಜಯನಗರ 7ನೇ ಬ್ಲಾಕ್, ಬೆಂಗಳೂರು. | 501.00 | 3678. | ಡಾ॥ ನಾಗಭೂಷಣ್ ಇಂದಿರಾನಗರ 2ನೇ ಹಂತ, ಬೆಂಗಳೂರು. | 1500.00 |
| 3667. | ಶ್ರೀ ಬಿ.ಜಿ. ವೆಂಕಟೇಶಯ್ಯ, ಸಹಶಿಕ್ಷಕರು, ಶ್ರೀ ಸಿ.ಸ.ಪ.ಪೂ. ಕಾಲೇಜು, ದೇವನಹಳ್ಳಿ. | 2001.00 | 3679. | ಶ್ರೀಮತಿ ವೀಣಾ ಮತ್ತು ಶ್ರೀ ಭರತ್‌ಕುಮಾರ್ ಚಿಕ್ಕಕಲ್ಲಸಂದ್ರ, ಬೆಂಗಳೂರು. | 1001.00 |
| 3668. | ಶ್ರೀಮತಿ ಶಿವಕಲ್ಪನಾಕುಮಾರ್, ಪಟ್ಟಣಗೆರೆ, ರಾಜರಾಜೇಶ್ವರಿ ನಗರ, ಬೆಂಗಳೂರು. | 1001.00 | 3680. | ಶ್ರೀ ಕೆ.ವಿ. ಮಂಜುನಾಥ್, ಪ್ರಾಂಶುಪಾಲರು, ಭಾರತ್ ಯೂನಿವರ್ಸಲ್ ಡಿ.ಇಡಿ. ಕಾಲೇಜು, ಹಳ್ಳೀ ಮೈಸೂರು, ಹೊಳೆನರಸೀಪುರ ತಾ. | 5005.00 |
| 3669. | ಶ್ರೀಮತಿ ಪುಟ್ಟಮ್ಮ ಕೋಂ. ಲೇಟ್ ಕೃಷ್ಣಾರೆಡ್ಡಿ ಬೆಳಂದೂರು ಅಂ., ವರ್ತೂರು ಹೊ. ಬೆಂಗಳೂರು. | 1001.00 | 3681. | ಶ್ರೀ ರಾಮಕೃಷ್ಣಾರೆಡ್ಡಿ, ಸಿದ್ಧಿವಿನಾಯಕ ಲೇಔಟ್, ಸಂಜಯನಗರ, ಬೆಂಗಳೂರು. | 1000.00 |

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| 3682. | ಮೆ॥ ಗೌರೀಶಂಕರ್ ಕೆಮಿಸ್ಟ್, ಕೆ.ಬಿ. ಕ್ರಾಸ್, ಕಿಬ್ಬನಹಳ್ಳಿ, ತುಮಕೂರು ಜಿಲ್ಲೆ. | 50,000.00 |
| 3683. | ಶ್ರೀ ಪಿ. ಮುನಿಸ್ವಾಮಪ್ಪ ಚೊಕ್ಕಸಂದ್ರ, ಟಿ. ದಾಸರಹಳ್ಳಿ ಅಂ., ಬೆಂಗಳೂರು. | 2001.00 |
| 3684. | ಶ್ರೀ ಎಸ್. ಗಂಗಾಧರ್, ಗುರುಸಿದ್ದಪ್ಪ ಅಂಡ್ ಸನ್ಸ್, ಇಬ್ರಾಹೀಂ ಸ್ಟ್ರೀಟ್, ಬೆಂಗಳೂರು. | 25,000.00 |
| 3685. | ಶ್ರೀ ಜಿ. ಅರುಣಪ್ರಸಾದ್ ಬಿನ್. ಜಿ. ಗಂಗಾಧರ್ ಚೊಕ್ಕಸಂದ್ರ, ಟಿ. ದಾಸರಹಳ್ಳಿ ಅಂ., ಬೆಂಗಳೂರು. | 25,001.00 |
| 3686. | ಶ್ರೀ ಕೆ.ಎಲ್. ಮಂಜುನಾಥ್, ಇಂಡಸ್ಟ್ರಿಯಲ್ ಲೇಔಟ್, ಮತ್ತಿಕೆರೆ, ಬೆಂಗಳೂರು. | 1000.00 |
| 3687. | ಶ್ರೀಮತಿ ಜ್ಯೋತಿ ಬಿ.ಪಂಥ್, ಉಪನ್ಯಾಸಕರು, ಶ್ರೀ.ಸಿ. ಶಿ. ಮ. ವಿ. ಬಿ.ಹೆಚ್. ರಸ್ತೆ, ತುಮಕೂರು. | 17100.00 |
| 3688. | ಶ್ರೀ ಡಿ.ಎಸ್. ರಾಜೇಂದ್ರಪ್ರಸಾದ್, ಸಿವಿಲ್ ಇಂ.ವಿಭಾಗ, ಎಸ್.ಐ.ಟಿ. ತುಮಕೂರು. | 8500.00 |
| 3689. | ಎಸ್.ಎಸ್.ಇ.ಎಸ್. ನೌಕರರ ಪತ್ತಿನ ಸಹಕಾರ. ಸಂಘ., ಎಸ್.ಐ.ಟಿ. ಕ್ಯಾಂಪಸ್, ಬಿ.ಹೆಚ್. ರಸ್ತೆ, ತುಮಕೂರು. | 25,001.00 |
| 3690. | ಶ್ರೀಮತಿ ಬಸವರಾಜು ಶಿವಗಂಗಮ್ಮ ಮತ್ತು ಕುಟುಂಬದವರು ಚೊಕ್ಕಸಂದ್ರ, ಟಿ. ದಾಸರಹಳ್ಳಿ ಅಂ., ಬೆಂಗಳೂರು. | 2001.00 |
| 3691. | ಶ್ರೀ ಸಿ.ಎಂ. ದಿವಾಕರ್, ಕಂಚಿಗಾರರ ಬೀದಿ, ಕೋಟೆ, ಚಿಕ್ಕಮಗಳೂರು. | 1001.00 |
| 3692. | ಶ್ರೀ ಕೆ.ವಿ. ದೇವರಾಜು, ದ್ವಿದ.ಸ. ಶ್ರೀ ಮಂ.ಬಾ.ಪ್ರೌ.ಶಾ. ನೆಲಮಂಗಲ ತಾ॥ | 2001.00 |
| 3693. | ಶ್ರೀ ಎಂ. ನಾಗರಾಜು, 'ಡಿ' ಗ್ರೂಫ್ ನೌಕರರು, ಶ್ರೀ ಶಾ.ಪ್ರೌ.ಶಾ. ತಂಡಗ, ತುರುವೇಕೆರೆ ತಾ. | 1000.00 |
| 3694. | ಶ್ರೀ ಕೆ.ಬಿ. ಜಯಣ್ಣ, ಕಾರ್ಯದರ್ಶಿಗಳು, ವಿದ್ಯಾವಾಹಿನಿ ಸಂಸ್ಥೆ, ತುಮಕೂರು. | 10,001.00 |
| 3695. | ಶ್ರೀಮತಿ ಜಯಮ್ಮ ಮತ್ತು ಅವರ ಮಕ್ಕಳು ಚುಂಚನಕುಪ್ಪೆ, ತಾವರೆಕೆರೆ ಹೊ., ಬೆಂ.ನಗರ ಜಿ. | 6001.00 |
| 3696. | ಶ್ರೀ ಮಹಂತೇಶ್, ಮೆ॥ ಕಾವ್ಯಶ್ರೀ ಪ್ಲಾಸ್ಟಿಕ್ಸ್, ಪೀಣ್ಯ ಸಮೀಪ, 2ನೇ ಸ್ಟೇಜ್, ಬೆಂಗಳೂರು. | 2001.00 |
| 3697. | ಶ್ರೀ ವನಶ್ರೀ ಶಿವನಂಜಯ್ಯ, ವಿಜಯನಗರ, ಬೆಂಗಳೂರು. | 4504.00 |
| 3698. | ಶ್ರೀ ಹೆಚ್. ಬಸವರಾಜಪ್ಪ, ಶ್ರೀ ಗಣೇಶ್ ಎಂಟರ್‌ಪ್ರೈಸಸ್ ಕಾರ್ಡ್ ರಸ್ತೆ, ವಿಜಯನಗರ, ಬೆಂಗಳೂರು. | 2001.00 |
| 3699. | ಶ್ರೀಮತಿ ಆರ್. ಎಸ್. ನಾಗರತ್ನ ಕೋಂ. ಆರ್.ಎಂ. ಚಂದ್ರಪ್ಪ ರಾಮಗೊಂಡನಹಳ್ಳಿ, ತುಮಕೂರು ತಾ., | 9809.00 |
| 3700. | ಶ್ರೀ ಶಿವಯೋಗಿ ಸಿದ್ಧರಾಮಸ್ವಾಮಿಗಳು, ಶ್ರೀ ಸಿದ್ಧರಾಮೇಶ್ವರ ಕ್ಷೇತ್ರ, ಬೆಳಗುಂಬ, ತುಮಕೂರು | 1001.00 |
| 3701. | ಶ್ರೀ ಎಂ.ಜಿ. ವೆಂಕಟೇಶಯ್ಯ, ವೃತ್ತಿ ಶಿಕ್ಷಕರು, ಶ್ರೀ.ಶಾ.ಪ್ರೌ.ಶಾಲೆ, ತಂಡಗ, ತುರುವೇಕೆರೆ ತಾ., | 1001.00 |
| 3702. | ಶ್ರೀಮತಿ ಜಯಮ್ಮ ಮತ್ತು ಶ್ರೀ ಜಿ. ನಂಜುಂಡಯ್ಯ, ನಿವೃತ್ತ ಶಿಕ್ಷಕರು, ಕುವೆಂಪುನಗರ, ತುಮಕೂರು. | 1001.00 |
| 3703. | ಶ್ರೀ ಪಿ. ಸಿದ್ಧಗಂಗಯ್ಯ ಬಿನ್ ಶಿವಣ್ಣ ಎಲ್.ಐ.ಸಿ. ಕಾಲೋನಿ, ಬೆಂಗಳೂರು. | 2001.00 |
| 3704. | ಶ್ರೀ ಅನಂತಪಡುಬಿದ್ರಿ ಬೂದಾಜಿನಗರ, ಕಲ್ವಾ, ಥಾಣೆ, ಮಹಾರಾಷ್ಟ್ರ | 5000.00 |
| 3705. | ಶ್ರೀ ಜಿ.ಸಿ. ರಾಜಣ್ಣ, ನಿ.ಪ್ರೊಫೆಸರ್, ಸಿದ್ಧಗಂಗಾ ಬಡಾವಣೆ, ತುಮಕೂರು. | 2501.00 |
| 3706. | ಅಧ್ಯಕ್ಷರು, ಶ್ರೀ ಸಿದ್ಧಗಂಗಾ ಸನಿವಾಸ ವಿದ್ಯಾಸಂಸ್ಥೆಗಳ ಬಳಕೆದಾರರ ಸಂಘ(ನಿ.,) ಶ್ರೀ ಸಿದ್ಧಗಂಗಾ ಮಠ, ತುಮಕೂರು. ತಾ. | 3003.00 |
| 3707. | ಶ್ರೀ ಆರ್. ಬಸವರಾಜಯ್ಯ, ಬಸವೇಶ್ವರನಗರ, ಬೆಂಗಳೂರು. | 1001.00 |
| 3708. | ಶ್ರೀ ಎಂ. ಬಸಪ್ಪ ಮಾಗೋಡು ಲೇಸರ್ ಮೆಷಿನಿಂಗ್ ಪ್ರೈ.ಲಿ. ಜಿಗಣಿ, ಆನೇಕಲ್ ತಾ., ಬೆಂಗಳೂರು. | 10,000.00 |
| 3709. | ಮೆ॥ ಸಿದ್ಧಗಂಗಾ ಪಟ್ಟಣ ಸಹಕಾರಿ ಬ್ಯಾಂಕ್ ನಿ., ಬಿ.ಹೆಚ್. ರಸ್ತೆ, ತುಮಕೂರು. | 44,000.00 |
| 3710. | ವಿದ್ಯಾರ್ಥಿಗಳು ಪ್ರಾಥಮಿಕ ಶಾಲೆ ಮತ್ತು ಪ್ರೌಢಶಾಲೆಗಳು ಎಸ್.ಎಸ್.ಇ.ಎಸ್. ಶ್ರೀ ಸಿದ್ಧಗಂಗಾ ಮಠ | 3,33,333.00 |
| 3711. | ಶ್ರೀ ಎಸ್.ವಿ. ಕೃಷ್ಣಕುಮಾರ್, ಆರ್ಕಿಟೆಕ್ಚರ್ ಇಂ.ವಿಭಾಗ, ಎಸ್.ಐ.ಟಿ. ತುಮಕೂರು. | 19,500.00 |
| 3712. | ಶ್ರೀ ಕೆ.ಎಂ. ಮಲ್ಲೇಶ್, ಉಪನ್ಯಾಸಕರು, ಸಿವಿಲ್ ಇಂ.ವಿಭಾಗ, ಎಸ್.ಐ.ಟಿ. ತುಮಕೂರು. | 10,000.00 |
| 3713. | ಶ್ರೀ ರಾಜೇಂದ್ರಪ್ರಸಾದ್, ಸಿವಿಲ್ ಇಂ.ವಿಭಾಗ, ಎಸ್.ಐ.ಟಿ. ತುಮಕೂರು. | 8,500.00 |
| 3714. | ಶ್ರೀ ಜಿ.ಎಸ್. ಪಂಚಾಕ್ಷರಯ್ಯ, ನಾಗರಭಾವಿ, ಬೆಂಗಳೂರು. | 6,000.00 |
| 3715. | ಶ್ರೀ ಎ.ಎಂ. ಮಲ್ಲಿಕಾರ್ಜುನಸ್ವಾಮಿ ಸಿವಿಲ್ ಇಂ.ವಿಭಾಗ, ಎಸ್.ಐ.ಟಿ. ತುಮಕೂರು. | 2001.00 |

(ಮುಂದುವರಿಯುತ್ತದೆ)



ಹರಳೂರಿನಲ್ಲಿ ನೂತನವಾಗಿ ನಿರ್ಮಿಸಿರುವ ಜಂಗಮ ಮಠದ ಉದ್ಘಾಟನಾ ಸಮಾರಂಭ ಪರಮಪೂಜ್ಯ ಶ್ರೀ ಶ್ರೀಗಳವರ ದಿವ್ಯಸಾನ್ನಿಧ್ಯದಲ್ಲಿ ನಡೆಯಿತು. ಸಮಾರಂಭವನ್ನು ಉದ್ದೇಶಿಸಿ ಅ.ಭಾ.ಶ.ಸಾ. ಪರಿಷತ್ತಿನ ಅಧ್ಯಕ್ಷ ಶ್ರೀ ಗೊ.ರು. ಚನ್ನಬಸಪ್ಪ ಅವರು ಮಾತನಾಡುತ್ತಿರುವುದು. ಸಮಾರಂಭದಲ್ಲಿ ಸಿದ್ಧಗಂಗಾ ಮಠದ ಕಿರಿಯ ಶ್ರೀಗಳು, ಹರಳೂರು ಮಠದ ಶ್ರೀಗಳು, ಹೊನ್ನಮ್ಮಗವಿ ಮಠದ ಶ್ರೀಗಳು ಹಾಗೂ ಹೆಚ್.ವಿ. ಪ್ರಕಾಶ್, ಹೆಚ್.ವಿ. ವಿಶ್ವನಾಥ್ ಮತ್ತು ಶ್ರೀ ಹೆಚ್.ವಿ. ವಿಭುಶಂಕರ್ ಅವರು ಉಪಸ್ಥಿತರಿದ್ದರು.




ಕಣನೂರು ಮಠದ ಪರಮಪೂಜ್ಯ ಲಿಂಗೈಕ್ಯ ಶ್ರೀ ಮ.ನಿ.ಪ್ರ ಶಾಂತವೀರ ಸ್ವಾಮಿಗಳವರ ಸಂಸ್ಮರಣೋತ್ಸವ ಸಮಾರಂಭವನ್ನು ಆಗಸ್ಟ್ ೨೨ರಂದು ಪರಮ ಪೂಜ್ಯ ಶ್ರೀ ಶ್ರೀಗಳವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಶ್ರೀ ದೇಗುಲ ಮಠದ ಪೂಜ್ಯ ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳು, ಕಣನೂರು ಮಠದ ಪೂಜ್ಯ ಶ್ರೀ ಶ್ರೀ ಮೃತ್ಯುಂಜಯ ಸ್ವಾಮಿಗಳು, ಮೇದಿನಿ ಮಠದ ಪೂಜ್ಯ ಶ್ರೀ ಶ್ರೀ ಶಿವಲಿಂಗ ಸ್ವಾಮಿಗಳು ಹಾಗೂ ಹರಗುರು ಚರಮೂರ್ತಿಗಳು, ಅ.ಭಾ.ಶ. ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಶ್ರೀ ಗೊ.ರು. ಚನ್ನಬಸಪ್ಪ, ಶಾಸಕ ಶ್ರೀ ಹೆಚ್.ಸಿ. ಬಾಲಕೃಷ್ಣ ಮೊದಲಾದ ಗಣ್ಯರು ಉಪಸ್ಥಿತರಿದ್ದರು.



ಆಗಸ್ಟ್ ೧೦ರಂದು ತುಮಕೂರಿನ ಸಿದ್ಧಗಂಗಾ ಮಹಿಳಾ ಕಾಲೇಜಿನ 'ಸ್ಫೂರ್ತಿ' ಸಾಂಸ್ಕೃತಿಕ ಕಾರ್ಯಕ್ರಮವನ್ನು ಪರಮಪೂಜ್ಯ ಶ್ರೀ ಶ್ರೀಗಳವರು ಉದ್ಘಾಟಿಸಿದರು. ಈ ಸಂದರ್ಭದಲ್ಲಿ ನಾಡೋಜ ಪ್ರಶಸ್ತಿ ಪುರಸ್ಕೃತ ಶ್ರೀ ಏಣಗಿ ಬಾಳಪ್ಪ ಮತ್ತು ಕಾಲೇಜಿನ ಮುಖ್ಯಸ್ಥರು ಉಪಸ್ಥಿತರಿದ್ದರು.




ನೆಲಮಂಗಲ ತಾಲ್ಲೂಕು ನರಸೀಪುರದಲ್ಲಿ ಸೆಪ್ಟೆಂಬರ್ ೫ ರಂದು ಬೆಂಗಳೂರು ಧರಿತ್ರಿ ಸಂಸ್ಥೆ ಏರ್ಪಡಿಸಿದ್ದ ಗೋಶಾಲೆ ಉದ್ಘಾಟನಾ ಸಮಾರಂಭದಲ್ಲಿ ಪರಮಪೂಜ್ಯ ಶ್ರೀ ಶ್ರೀಗಳವರು, ಶ್ರೀ ಕೃ. ಸೂರ್ಯನಾರಾಯಣ ರಾವ್ ಅವರೊಂದಿಗೆ ವಿಚಾರ ವಿನಿಮಯ ನಡೆಸುತ್ತಿರುವುದು.




ತುಮಕೂರಿನ ರೋಟರಿಯವರು ಹಾಲನೂರಿನ ಶ್ರೀ ಸಿದ್ಧಗಂಗ ಸಂಯುಕ್ತ ಪದವಿ ಪೂರ್ವ ಕಾಲೇಜಿನಲ್ಲಿ ಏರ್ಪಡಿಸಿದ್ದ ಪ್ರತಿಭಾ ಪುರಸ್ಕಾರ ಸಮಾರಂಭದಲ್ಲಿ ಶ್ರೀಮಠದ ಕಿರಿಯ ಶ್ರೀ ಶ್ರೀಗಳಾದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರು ವಿದ್ಯಾರ್ಥಿಗಳಿಗೆ ಪುಸ್ತಕಗಳನ್ನು ವಿತರಿಸಿದರು. ಈ ಸಂದರ್ಭದಲ್ಲಿ ರೋಟರಿ ಪದಾಧಿಕಾರಿಗಳು ಉಪಸ್ಥಿತರಿದ್ದರು.



ಶ್ರೀ ಸಿದ್ಧಗಂಗಾ ಕಲಾ, ವಿಜ್ಞಾನ ಮತ್ತು ವಾಣಿಜ್ಯ ಕಾಲೇಜಿನಲ್ಲಿ ಪ್ರಥಮ ಪದವಿ ವಿದ್ಯಾರ್ಥಿಗಳಿಗೆ ಏರ್ಪಡಿಸಿದ್ದ ಸ್ವಾಗತ ಸಮಾರಂಭದಲ್ಲಿ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳವರು ಆಶೀರ್ವಚನ ನೀಡುತ್ತಿರುವುದು.